# ವಿಶ್ವಕವಿ

## ಕಾಳಿದಾಸ–ಕೃತಿದರ್ಶನ.



ವಿದ್ಯಾರಣ್ಯ.

1951

ಪ್ರಕಾಶಕರು:

ಬಾಲಸಾಹಿತ್ಯ ಮಂಡಲ ಲಿಮಿಟೆಡ್,

ಕೊಡಿಯಾಲಬೈಲ್, ಮಂಗಳೂರು,

# ವಿಶ್ವಕವಿ

## ಕಾಳಿದಾಸ-ಕೃತಿದರ್ಶನ.

ಬರೆದವರು: ಎಮ್. ಸುಬ್ರಾಯನ್,
ಜ್ಯೋತಿಷ ಮತ್ತು ಸಾಹಿತ್ಯ ಶಿರೋಮಣಿ,
ಕನ್ನಡ ಮತ್ತು ಹಿಂದೀ ವಿದ್ವಾನ್,
ಕೆನರಾ ಹೈಸ್ಕೂಲ ಅಧ್ಯಾಪಕ ಮಂಗಳೂರು.

---





ಪ್ರಕಾಶಕರು
ಬಾಲಸಾಹಿತ್ಯಮಂಡಲ ಲಿಮಿಟೆಡ್.
ಕೊಡಿಯಾಲಬೈಲ್,
ಮಂಗಳೂರು.

ಬೆಲೆ: ೧-೦-೦.

## ಪರಿವಿಡಿ.

| | | ಪುಟ. |
|---|---|---|
| ೧. | ಸ್ತ್ರೀ ಪುರುಷರ ಪ್ರಕೃತಿಯನ್ನು ಚಿತ್ರಿಸುವ ಕಾಳಿದಾಸ | 1 |
| ೨. | ಜನನೀ ಜನಕರ ಸ್ಥಾನಮಾನವನ್ನು ನಿರ್ದೇಶಿಸುವ ಕಾಳಿದಾಸ | 6 |
| ೩. | ರಾಷ್ಟ್ರ ಜಾಗೃತಿಯನ್ನೊರೆದ ಕಾಳಿದಾಸ | 10 |
| ೪. | ಸ್ತ್ರೀ ಪುರುಷರಲ್ಲಿ ಭೇದವನ್ನು ತೋರದ ಕಾಳಿದಾಸ | 14 |
| ೫. | ಸ್ತ್ರೀ ಸಮಾಜದ ಹಿತವನ್ನೊರೆವ ಕಾಳಿದಾಸ | 19 |
| ೬. | ನಗರ ಸುಖವನ್ನೊರೆವ ಕಾಳಿದಾಸ | 24 |
| ೭. | ಉಪಮಾ ಕಾಳಿದಾಸಸ್ಯ | 28 |
| ೮. | ರೂಪಕರಂಗ ರಚನೆಯ ಕಾಲ ಕಲಾಪರನಾದ ಕಾಳಿದಾಸ | 44 |
| ೯. | ವಿನಯಶೀಲನಾದ ಕಾಳಿದಾಸ | 52 |
| ೧೦. | ಸೀತೆಯ ಘನತೆಯನ್ನು ಚಿತ್ರಿಸುವ ಕಾಳಿದಾಸ | 56 |
| ೧೧. | ರಥವೇಗದಿಂದ ಕಥಾವಸ್ತುವನ್ನು ಚಿತ್ರಿಸುವ ಕಾಳಿದಾಸ | 61 |
| ೧೨. | ಶಾಕುಂತಲದಿಂದ ಲೋಕ ಚರಿತ್ರವನ್ನು ಚಿತ್ರಿಸುವ ಕಾಳಿದಾಸ | 66 |
| ೧೩. | ಶಾಕುಂತಲದ ನಾಲ್ನುಡಿಯಿಂದ ವಿಶ್ವವಿಶ್ರುತನಾದ ಕಾಳಿದಾಸ | 75 |
| ೧೪. | ಶಕುಂತಲೆಯ ಗೌರವವನ್ನು ತೋರುವ ಕಾಳಿದಾಸ | 81 |
| ೧೫. | ಮಹಿಳೆಯರಿಗೆ ಮಾಂಗಲ್ಯವನ್ನೊರೆವ ಕಾಳಿದಾಸ | 90 |
| ೧೬. | ಕಾವ್ಯ ವಿಧಾತನಿಗೊರೆವ ಕಾಳಿದಾಸ | 98 |

# ಮುಮ್ಮಾತು.

ಭಾರತೀಯ ಮಹಾಕವಿಗಳ ಕಾವ್ಯ ಸಾಗರದೊಳಗೆ ಆವಾವ ವಸ್ತುಗಳು ಅಡಗಿವೆಯೆಂಬುದನ್ನು ಶೋಧಿಸಿ ವಿಮರ್ಶಿಸಿ ತಿಳಿಯತಕ್ಕ ವಿಚಾರವೇ ಆಗಿದ್ದು ಆ ಕಡೆ ನಮ್ಮ ಗಮನ ಹರಿದು ನಮ್ಮ ಜನತೆಯ ಪರಿಚಯವನ್ನು ಮಾಡಿಕೊಡುವ ಕರ್ತವ್ಯಭಾರ ತಿಳಿದವರಲ್ಲಿ ಅಂತೆಯೇ ಬಾಕಿ ಉಳಿದಿದೆ. ವಿಶ್ವಕವಿ ಕಾಳಿದಾಸನ ಕೃತಿ ರತ್ನಾಕರದಿಂದ ಇದೇ ಮೇಲಣ ಉದ್ದೇಶದಿಂದ ಕೆಲವು ವಿಚಾರಪರ ವಸ್ತುಗಳನ್ನು ವಾಚಕರ ಅವಗಾಹನೆಗೆ ಈ ಸಂಕಲನದಲ್ಲಿರಿಸಲಾಗಿದೆ. ಈ ವಸ್ತುಗಳು ಅಂದಗೆಟ್ಟಿದ್ದರೆ ಅದು ಕಾಳಿದಾಸನ ದೋಷವಲ್ಲವೆಂದು ಕಾಳಿದಾಸನ ಕೃತಿರಸಜ್ಞರಿಗೆ ಬೇರೆ ಹೇಳಬೇಕಾಗಿಲ್ಲ. ಒರೆಗಲ್ಲಿನಲ್ಲಿ ಹಚ್ಚಿಬಂದ ಬಣ್ಣ ಅದರ ಬೆಲೆಗಾಣಿಸದೇ?

ವಿಶ್ವ ಕವಿ ಕಾಳಿದಾಸನು ಜನತೆಯ ಕಲ್ಯಾಣ ಸಾಧನೆಗಾಗಿಯೇ ತನ್ನ ಗ್ರಂಥಗಳನ್ನು ರಚಿಸಿರುವನೆಂದು ಈ ಪುಸ್ತಕದಲ್ಲಿರುವ ಸಮಾಲೋಚನೆಗಳಿಂದರಿತು ಬಂದರೆ ಮಾಡಿದ ಯತ್ನ ಸಫಲ. ಇದಲ್ಲದೆ ಜನತೆ, ವಿಶ್ವಕವಿ ಕಾಳಿದಾಸನ ನೀತಿಮಯ-ಉಪದೇಶ ವಚನಗಳನ್ನು ಮನಸ್ಸಿನಲ್ಲಿರಿಸಿ ಅವನ್ನು ಆಚರಣೆಯಿಂದ ತೋರ ತೊಡಗಿದರೆ ಆತನ ಉದ್ದೇಶವನ್ನು ಈಡೇರಿಸಿದಂತಾಗುವುದು.

ಈ ಪುಸ್ತಕದಲ್ಲಿರುವ ಎಲ್ಲಾ ಬರೆಹಗಳೂ 'ಸುವಾಸಿನಿ' ಮತ್ತು 'ತ್ರಿವೇಣಿ' ಪತ್ರಿಕೆಗಳಲ್ಲಿ ಹಿಂದೆಯೇ ಪ್ರಕಟಗೊಂಡುವಾದರೂ ಈ ಪತ್ರಿಕೆಗಳ ಸಂಪಾದಕ ವರ್ಗದ ಹಾಗೂ 'ಪ್ರಭಾತ' ಪತ್ರಿಕಾ ಸಂಪಾದಕರಾದ ಶ್ರೀ ಕುಡ್ಪಿ ವಾಸುದೇವ ಶೇಣೈ ಇವರುಗಳ ಸಹೋದರ ನಲ್ಮೆಯ ಮುನ್ನಡೆಸುವಿಕೆಯನ್ನು ವಿಸ್ಮರಿಸುವುದನರ್ಹವಾಗಿದೆ. ಅದೀಗ ಪುಸ್ತಕ ರೂಪದಲ್ಲಿ ವಾಚಕರ ಕೈಯಲೊಪ್ಪುವಂತೆ ಅಕ್ಕರೆಯಿಂದ ಪ್ರಕಾಶನಕ್ಕೆ ಹೊರಟ "ಬಾಲಸಾಹಿತ್ಯ ಮಂಡಲ ಲಿಮಿಟೆಡ್" ಇದರ ಅಧಿಕಾರಿಗಳಾದ ಶ್ರೀ ಯು. ಸುಮಿತ್ರ ಭಟ್ಟ, ಇವರಿಗೂ ನನಗೂ ಅದೇ ಅಕ್ಕರೆಯ ಭಾವನೆಯು ಸದಾ ವೃದ್ಧಿಂಗತವಾಗಲೆಂದು ದೇವರೊಡನೆ ಬೇಡಿಕೆ.

ಯಾವ ಗ್ರಂಥದಲ್ಲಾದರೂ 'ತಪ್ಪು-ಒಪ್ಪೋಲೆ'ಯನ್ನು ಅನುಬಂಧವಾಗಿ ಕೊಡುವುದು ಸಂತೋಷಕರ ವೃತ್ತಿಯಲ್ಲ. ಅದನ್ನು ಏಕೆ ಕೊಡಬೇಕಾಯಿತೆಂಬುದನ್ನು ವಿವರಿಸುವುದೂ ಹಿತಕರವಲ್ಲ. ಪ್ರಮಾದಗಳನ್ನು ವಿವರಿಸುವುದಕ್ಕಿಂತ ಇನ್ನೊಂದು ಮುದ್ರಣದಲ್ಲಿ ಅವುಗಳ ಪುನರಾವರ್ತನೆಯಾಗದಂತೆ ಎಚ್ಚರಿಕೆ ವಹಿಸುವೆವೆಂದಿಷ್ಟೇ ಹೇಳಿ ಮುದ್ರಣಕ್ಕಾಗಿ ತೆಗಳಿಕೆ ಹೊಗಳಿಕೆಗಳೆರಡನ್ನೂ ಇಚ್ಛಿಸದೆ ಈ ಗ್ರಂಥನಾಯಕನಾದ ವಿಶ್ವಕವಿ ಕಾಳಿದಾಸನ ಕೃತಿಯನ್ನು ಸತ್ಕರಿಸಲು ಹೊದಿಸಿದ ವಸ್ತ್ರವನ್ನು ನೋಡದೆ ಆ ಮಹಾತ್ಮನ ಕೃತಿಯನ್ನೇ ವಾಚಕರು ಕಾಣಲು ಯತ್ನಿಸುವರೆಂದೇ ಭರವಸೆ.

ಇತಿ ಆತ್ಮೀಯಭಾವದ,

ಎಮ್. ಸುಬ್ರಾಯನ್

ಮಂಗಳೂರು,
ತಾ. 2-10-'51.

# ವಿಶ್ವಕವಿ

## ಸ್ತ್ರೀ-ಪುರುಷರ ಪ್ರಕೃತಿಯನ್ನು ಚಿತ್ರಿಸುವ ಕಾಳಿದಾಸ

ಗಂಡು ಹೆಣ್ಣುಗಳು ಪ್ರಕೃತಿಯಿಂದಲೇ ಭಿನ್ನರು. ಆಕೃತಿ, ವಿಚಾರ, ನಡತೆ ಇವೂ ಬೇರೆ ಬೇರೆ. ಗಂಡು ಹಕ್ಕಿ ಇರಲಿ, ಅದರ ಗುಣ ನಡತೆ ಆಕಾರ ಗಳು ಬೇರೆ. ಗಂಡು ತೋರುತ್ತಿರುವ ನಡೆ ಹೆಣ್ಣಿನಂತಲ್ಲ. ಹೆಣ್ಣಿನ ಜೀವನ ಬೇರೆ. ಜೇಸುನೊಣಗಳನ್ನು ಶೋಧಿಸಿದರೆ ಸಾಕು. ಅಲ್ಲಿಯೂ ಇದನ್ನೇ ಕಾಣುವೆವು. ಮನುಷ್ಯವರ್ಗದ ಗಂಡು ಹೆಣ್ಣುಗಳ ವಿಷಯವನ್ನು ಕೇಳುವುದೇ ಬೇಡ. ಎಲ್ಲವೂ ಬೇರೆ. ಸ್ತ್ರೀ ಪುರುಷರು ಜೀವ ವರ್ಗದಲ್ಲಿ ಕಾಣಬರುವ ದ್ವಂದ್ವಗಳು.

ದುಃಖ ಸುಖ, ಹಗಲು ರಾತ್ರಿ, ಸ್ವಪ್ನ ಜಾಗೃತಿ, ಗಂಡು ಹೆಣ್ಣು, ಇವು ಜಗತ್ತಿನಲ್ಲಿ ಕಾಣಬರುವ ದ್ವಂದ್ವಗಳು. ಈ ದ್ವಂದ್ವಗಳು ಎಂತಹವು? ಇವುಗಳ ಪ್ರಕೃತಿ ಏನು? ಜೀವನದಲ್ಲಿ ಇವುಗಳ ಸಂಪರ್ಕವೇಕೆ? ಒಂದೂ ಸ್ಥಿರವಲ್ಲ. ಸ್ಥಿರವಿರದ ಇವುಗಳನ್ನು ಮಾನವನು ಕಾಣುತಿದ್ದು ಅನುಭವಿಸುತಿದ್ದು ಅವುಗಳ ಪರಿಚಯಗೊಂಡಂತಿರುವುದಿಲ್ಲ. ಇಲ್ಲವಾದರೆ ಇನ್ನೂ ಕಾಣಬರುತ್ತಿರುವ ಜನರಲ್ಲಿರುವ ಭೇದಭಾವವೇಕೆ? ಉಚ್ಚ ನೀಚ, ಧನಿಕ ಬಡವ ಎಂಬ ವಿಚಾರದ ನೆಲೆಯೇಕೆ? ಅದನ್ನೇ ಮಾಡುತ್ತಿರುವೆವು, ಭೋಗಿಸುತ್ತಿರುವೆವು?

ಭೋಗವಸ್ತುಗಳನ್ನು ಕೂಡಿಡುವಲ್ಲೂ ಇದೇ ಅಭ್ಯಂತರವಿದೆ. ಗಂಡು ಹೆಣ್ಣು ಕೂಡಿಡುವ ಭೋಗಿಸುತ್ತಿರುವ ಭೋಗಪಡುವ ದೃಷ್ಟಿ ಭಿನ್ನ. ಇದನ್ನು ಉಚ್ಚ ಮನಶ್ಶಾಸ್ತ್ರಜ್ಞನು ತಿಳಿಯಬಹುದು. ಕವಿಗಳ ಗ್ರಂಥದಲ್ಲಿ ಕಾಣ ಬಹುದು. ಆದರೆ ಎಲ್ಲಾ ಕವಿಗಳ ಗ್ರಂಥಗಳಲ್ಲಿ ಕಾಣಲಾರೆವು.

ಕಿರಿಯ ಹೆಣ್ಣು ಮಕ್ಕಳು, ಗೊಂಬೆಯನ್ನು ಕೊಂಡು, ಕುಣಿಸಿ ಕಾಯು ವಂತೆ ಕಿರಿಯ ಗಂಡು ಮಕ್ಕಳು ಅದನ್ನು ಕುಣಿಸವು; ಕಾಯಲಾರವು. ಗಂಡು ಮಗು ಅದನ್ನು ನುಚ್ಚು ನೂರು ಮಾಡುವುದು. ಅದನ್ನು ಹಿಡಿಯುವ ಕಾದಿ ಡುವ ಕ್ರಮ ಎಲ್ಲಾ ಹೆಣ್ಣು ಮಗುವಿಗಿಂತ ಭೇದವಾಗಿಯೇ ಇರುವುದು.

ಆಟದ ಸಾಮಾಗ್ರಿಗಳಲ್ಲಿ ಮಾತ್ರವಲ್ಲ; ಚಿಕ್ಕ ಪಾತ್ರೆ, ಉಡುಪು ಆಭರಣಗಳ ವಿಷಯಗಳಲ್ಲಿ ಇದೇ ಭೇದಸ್ಥಿತಿಯು ಕಂಡುಬರುತ್ತದೆ.

ಗಂಡುಮಕ್ಕಳು ಮಡಕೆ ಆಭರಣಗಳನ್ನು ಕಾಯುವ ಹಾಗಿಲ್ಲ. ಗಂಡು ಮಕ್ಕಳು ಆಡುವ ಆಟವೇ ಬೇರೆ. ಮಣ್ಣಾಟ, ಧೂಳಿಯಾಟ, ಅಲ್ಲಿನಾಡುವ ಶೋಧನೆ, ಶೋಧನೆ ಮಾಡಿ ಕಂಡುದನ್ನು ತಿಳಿಸುತ್ತಿರುವ ವಿಚಾರಗತಿಗಳು ವಿವಿಧಗಳಿರುತ್ತವೆ. ಭಿಕ್ಷುಕ ಬರಲಿ; ಇನ್ನೊಬ್ಬ ಹಾವಾಡಿಗ ಬರಲಿ; ಯಾವ ವೇಷಗಳೂ ಬರಲಿ, ಆ ವೇಶದ ಅನುಕೃತಿಯನ್ನು ತಾಳ ಹೋಗುತ್ತಿವೆ. ಹುಲಿ ವೇಷ ಕುಣಿಯುವುದನ್ನು ಕಂಡು ಕಲಿಯುವವು. ವಿಚಿತ್ರ ಪ್ರಾಣಿಗಳ ಕೂಗನ್ನು ಕಲಿತು ಅಂತೆಯೇ ಕೂಗ ಹೊರಡುವವು. ಬೆಕ್ಕು ನಾಯಿಯೇ ಮೊದ ಲಾದ ಗೃಹಪ್ರಾಣಿಗಳನ್ನು ಗಂಡು ಮಕ್ಕಳು ಬಂಧಿಸಿ ಅಂಕೆಯಲ್ಲಿಡತೊಡಗು ತ್ತವೆ. ಕಾಳಿದಾಸನ ಸರ್ವದಮನನ ಬಾಲ್ಯ ಇದಕ್ಕೆ ನಿದರ್ಶನ. ಇದಲ್ಲದೆ ಗಂಡು ಮಕ್ಕಳು ಅಧಿಕಾರ ಪೌರುಷಗಳನ್ನು ತೋರಿ ಸೋತಾಗ ಕೂಗಹೊರ ಡುತ್ತವೆ· ಹೆಣ್ಣುಮಕ್ಕಳು ಈ ಪ್ರಾಣಿಗಳನ್ನು ಮಕ್ಕಳಂತೆ ರಕ್ಷಿಸುವ ಯತ್ನಕ್ಕೆ ಹೊರಡುತ್ತವೆ. ಮಲಗಿಸಿ ತೂಗಿಡುವ ಜೋಗುಳಗೊಳ್ಳುವ ಕರ್ತವ್ಯವೃತ್ತಿ ಗಳುಳ್ಳವಾಗುತ್ತವೆ. ಇವನ್ನೆಲ್ಲಾ ನಾವು ಅನುನಿತ್ಯದ ಜೀವನದಲ್ಲಿ ಕಾಣುತ್ತಿ ರುವೆವಾದರೂ ಪ್ರಕೃತಿ ತತ್ವದ ಕಡೆಗೆ ಗಮನಿಸುತ್ತಿಲ್ಲ. ಅವನ್ನು ಚಿತ್ರಿಸುವ ಯತ್ನಕ್ಕೆ ಹೋಗುತ್ತಿಲ್ಲ. ಕವಿಗಳ ಕಾವ್ಯ, ಲೇಖಕರ ಲೇಖ ಸುಂದರವಾಗ ಬೇಕಾದರೆ ಪ್ರಕೃತಿಯ ಅಧ್ಯಯನ ಮುಖ್ಯ.

ಪ್ರಕೃತಿಯನ್ನು ಅಧ್ಯಯನ ಮಾಡಿದಂತೆ ಕವಿಯ ಕಾವ್ಯ ಶೋಭಾ ಪೂರ್ಣವಾಗುವುದು. ಪ್ರಕೃತಿಯ ಬೆಡಗು ಅಮರವಾಗಿರುವಂತೆ ಕಾವ್ಯ ಅಮರವಾಗುವುದು. ಕಾವ್ಯದ ಅಮರತೆ ಪ್ರಕೃತಿಯ ಚಿತ್ರಣದಲ್ಲಿ,–ರೂಪೀ ಕರಿಸುವಿಕೆಯಲ್ಲಿ. ಪ್ರಕೃತಿಯನ್ನು ಕವಿ ಅನುಭೂತಿಗೊಂಡಷ್ಟು ಕಾವ್ಯದ ರಮಣೀಯತೆಯ ಸೊತ್ತು ಅವನಲ್ಲಿ ತುಂಬುವುದು. ತುಂಬಿದ ಈ ಸಂಪ ತ್ತನ್ನು ಕಾವ್ಯ ಮಾರ್ಗವಾಗಿ ಉಣಬಡಿಸ ಹೊರಟಾಗ–ಜನತೆಗೆ ಕೊಡ ಹೊರ ಟಾಗ ಕವಿಯು ತನ್ನ ಶಬ್ದ ಸಂಪತ್ತು ಬಲಿತಷ್ಟೇ ಕೊಡಲು ಶಕ್ತನಾಗುವನು. ಈ ಶಬ್ದ ಶಕ್ತಿ ಎಷ್ಟಿರುವುದೋ ಅದಕ್ಕನುಗುಣವಾಗಿ, ಅದನ್ನು ಕೊಡುವನು. ಪ್ರಕೃತಿಯ ಪರಿಚಯ ಇದರಿಂದ ಶಬ್ದ ಪರಿಮಿತಿಯಲ್ಲೇ ಅಳೆದಿದ್ದು ಪೂರ್ಣ ವಾಗಿರುವುದಿಲ್ಲ. ಪೂರ್ಣ ಹೊರಚೆಲ್ಲುವುದಿಲ್ಲ. ಏನೋ ಅಲ್ಪ ಸ್ವಲ್ಪ

ಕೊಡುತ್ತಾನೆ, ಅದನ್ನುಣ್ಣುತ್ತೇವೆ; ಆನಂದಿಸುತ್ತೇವೆ. ಅವನು ಉಂಡ ಪ್ರಕೃತಿಯ ಸಂಪತ್ತು ಎಷ್ಟೆಂದು ಅದಾಗ ಊಹಿಸಬೇಕು. ಊಹಿಸಿ ಆ ಸಂಪತ್ತನ್ನು ಮನಸ್ಸಿನ ಮೂಲಕ ಕಂಡುಕೊಂಡರೆ ಕವಿಯು ಪ್ರಕೃತಿಯನ್ನು ಉಂಡ ಸ್ಥಾನಕ್ಕೆ ಮುಟ್ಟಿದಂತಾಗುವುದು. ಅವನುಂಡ ಪ್ರಕೃತಿಯ ಸಂಪತ್ತಿನ ಸುಖ ಪಡೆದಂತಾಗದು. ಅವನುಂಡ ಎಂಜಲಿನ ರುಚಿ ಉಂಡಂತೆ ಮಾತ್ರ ಅದಾಗುವುದು. ಕಾಳಿದಾಸನ ಕೃತಿ ಪ್ರಕೃತಿಯ ತವರುಮನೆಯಂತಿದೆ. ಅದನ್ನು ಅಲ್ಲಲ್ಲಿ ಓದಿ ತಿಳಿಯಬೇಕು.

ಸ್ತ್ರೀ ಪುರುಷರ ಸ್ವಭಾವವನ್ನು ಕಾಳಿದಾಸನು ಎಲ್ಲೆಡೆಯಲ್ಲೂ ಚಿತ್ರಿಸಿರುವನು. ಶಾಕುಂತಳಾ ನಾಟಕದಲ್ಲಿ ಆದನ್ನು ಉದ್ಧರಿಸಿ ಹೇಳಿದಂತೆ ಬೇರೆಲ್ಲೂ ಕಾಣಲಾರೆವು.

ಈಶದೀಶಚ್ಚುಂಬಿತಾನಿ ಭ್ರಮರೈಃ ಸುಕುಮಾರ ಕೇಸರಶಿಖಾನಿ
ಅವತಂಸಯಂತಿ ದಯಮಾನಾಃ ಪ್ರಮದಾಃ ಶಿರಿಷ ಕುಸುಮಾನಿ ।

(ಶಾಕುಂತಲ)

ಯೋಷಾಜನವೊಲವಿಂದೆ ಶಿರೀಷಮನತಿಮೃದುಲ ಕೇಸರಾಗ್ರಮನಳಿಯಿಂ ॥
ದೀಷುಚ್ಚುಂಬಿತಮಂಸವಿಶೇಷದಯಂ ಕನ್ನವುರವನೆಸುಗುವುದಲ್ತೇ ॥

(ಕರಿಬಸವ ಶಾಸ್ತ್ರಿಗಳ ಪರಿವರ್ತನೆ)

"ತುಂಬಿಗಳಿಂದ ಅಲ್ಪ ಸ್ವಲ್ಪ ಮುದ್ದಿಟ್ಟ ಸುಕುಮಾರವಾದ ಕೇಸರ ಶಿಖೆಗೂಡಿದ ಶಿರೀಷ ಕುಸುಮಗಳನ್ನು ಪ್ರಮದೆಯರು ದಯೆಗೂಡಿದವರಾಗಿ ಅವತಂಸಗೊಳಿಸುವರು," ಎಂದು ಕಾಳಿದಾಸನು ಸ್ತ್ರೀ ಪುರುಷರ ಪ್ರಕೃತಿಯನ್ನು ಹೇಳಿಬಿಟ್ಟಿರುವನು. ಇದರ ತಾತ್ಪರ್ಯವೇನು? ತುಂಬಿಯಂತಹರು ಪುರುಷರು ಎಂದೇ? ತುಂಬಿ ಹೂವನ್ನು ಮುದ್ದಿಟ್ಟುಬಿಡುವುದು. ಬಂಡುಣ್ಣುವುದು. ಹೂವನ್ನು ಬಾಗಿಸುವುದು. ಪುರುಷನು ಹೂವನ್ನು ಹಿಡಿದು ಹಿಚುಕಬಹುದು. ಗಂಡುಮಕ್ಕಳ ಕೈಯಲ್ಲಿ ಹೂವಿತ್ತರೆ ಅವು ಅದನ್ನು ಹರಿದುಬಿಡುವವು. ಹೆಣ್ಣು ಮಕ್ಕಳ ಕೈಗೆ ಕೊಟ್ಟರೆ ಅದನ್ನು ಪ್ರೀತಿಯಿಂದ ತಲೆಯಲ್ಲಿ ಮುಡಿಯುವರು.

ಪ್ರಕೃತ ಪದ್ಯದಲ್ಲಿ ಕವಿ ಕಾಳಿದಾಸನು ಅತಿ ಉನ್ನತ ದೃಷ್ಟಿಯಿಂದ ಸ್ತ್ರೀ ಪುರುಷರ ಪ್ರಕೃತಿಯನ್ನು ಚಿತ್ರಿಸಿರುವನು. ಸ್ತ್ರೀಯರಿಗೆ "ಪ್ರಮದಾ" ಶಬ್ದವನ್ನು ಕೊಟ್ಟಿರುತ್ತಾನೆ. 'ಪ್ರಮದೆ'ಯರೆಂಬ ಪದದಿಂದ ರೂಪ ಸಂಪ

ತ್ರಿನಿಂದ ಕೂಡಿ ಮದ ಹೊಂದಿರುವ ಚೆಲುವೆಯರೆಂಬ ಅಭಿಪ್ರಾಯ ಹೊರ ಹೊಮ್ಮುವುದು. ಇಂತಹ ಚೆಲುವೆಯರು ಕೃಪೆಗೂಡಿದವರಾಗಿ ಹೂವನ್ನು ತಲೆಯಲ್ಲಿ ಮುಡಿಯುವರು; ಎಂದು ಹೇಳುವನು. ಸಾಮಾನ್ಯವಾಗಿ ಸ್ತ್ರೀ ಪ್ರಕೃತಿಯು ಹೂವನ್ನು ಮುಡಿಯುವುದರಲ್ಲಿ ಆಸಕ್ತಿಯನ್ನು ತೋರುವುದು ಸಹಜ. ಅದರಲ್ಲೂ ರೂಪದಿಂದ, ಸಂಪತ್ತಿನಿಂದ, ಮದಭರಿತೆಯರಾದ ನಾರಿ ಯರಿಗೆ ಈ ವಿಷಯದಲ್ಲಿ ಆಸಕ್ತಿ ಇನ್ನೂ ಹೆಚ್ಚು. ಇಂತಹರ ಕೃಪಾದೃಷ್ಟಿ ಹೂವ ಮೇಲೆ ತುಂಬಾ.

ಗಂಡುಸು ತುಂಬಿಯಂತಹನು. ಆತನು ಸದಾ ಏಕಾನುರಾಗವರ್ತಿ ಯಾಗಿರುವುದಿಲ್ಲ. ತುಂಬಿಯಂತೆ ಅಲ್ಪ ಕಾಲ ಭೋಗ ಸಂತೃಪ್ತನಾಗುತ್ತಾನೆ. ಬಹು ವಿವಾಹಕ್ಕೂ ಹೊರಡುವನು. ಕವಿ ಕಾಳಿದಾಸನಿಗೆ ತುಂಬಿಯ ಚಿತ್ರದ ಮೂಲಕ ದುಷ್ಯಂತನನ್ನು ಚಿತ್ರಿಸಬೇಕಿದೆ. ದುಷ್ಯಂತನು ಮಾಡಿದ ಕೆಲಸ ಅಂತಹುದು.

ಅಸಂಭೃತಂ ಮಂಡನಮಂಗಯಷ್ಟೇರನಾಸವಾಖ್ಯಂ ಕರಣಂ ಮದಸ್ಯ ।
ಕಾಮಸ್ಯ ಪುಷ್ಪವ್ಯತಿರಿಕ್ತಮಸ್ತ್ರಂ ಬಾಲ್ಯಾತ್ಪರಂ ಸಾಥವಯಃ ಪ್ರಪೇದೇ ॥

(ಕುಮಾರಸಂಭ)

“ಪಾರ್ವತಿಯು ತನ್ನ ದೇಹದಲ್ಲಿ ಕೂಡಿರಿಸದ ಅಲಂಕಾರವನ್ನು ಪಡೆ ದಳು. ಅದು ಮದಜನಕವಾದ ಪಾನೀಯವಲ್ಲದ ಸೊತ್ತಾಗಿತ್ತು. ಕಾಮನ ಹೂವಿನಿಂದ ಭಿನ್ನವಾದ ಬಾಣವಾಗಿತ್ತು. ಬಾಲ್ಯದಿಂದ ಬೇರಾದ ಅಂತಹ ವಯಸ್ಸನ್ನು ಆಕೆ ಪಡೆದಳು” ಎಂದು ಕವಿಯು ಹೇಳಿರುವನು.

ಪ್ರಾಯಕ್ಕೆ ಬಂದ ಪಾರ್ವತಿ ಇಂತಹಳಾದಳೆಂದು ಕವಿ ಹೇಳುವನು. ಇಲ್ಲಿ ಸ್ತ್ರೀ ಜಾತಿಯನ್ನು ಕುರಿತು ಈ ರೀತಿಯಿಂದ ಹೇಳಿರುವನಾದರೂ ಯೌವ ನದ ಪ್ರಕೃತಿಯನ್ನು ಚೆನ್ನಾಗಿ ಹೇಳಿರುವನು. ಯೌವನವು ದೇಹಕ್ಕೆ ಕೂಡಿ ಡದೆ ಬಂದ ಸೌಂದರ್ಯ. ಈ ಸೌಂದರ್ಯವು ತನ್ನಿಂದ ತಾನೇ ದೇಹ ವನ್ನು ಅಲಂಕರಿಸುತ್ತಿದೆ. ಇದು ಬಂದೊಡನೆ ಮದ ತುಂಬಿಬಿಡುತ್ತದೆ. ಕಾಮನಿಗೆ ಇದೊಂದು ಹೊಸತೊಂದು ಬಾಣವಾಗಿ ಬಿಡುವುದು. ಜೀವಿಗಳ ಪ್ರಕೃತಿ ಪಾಠ ಇಲ್ಲಿ ಕಾಣುತ್ತದೆ.

ಶಕುಂತಳೆಯು ಪತಿಗೃಹಕ್ಕೆ ತೆರಳುವಳು. ಆಗ ಕಣ್ವನೊಡನೆ 'ಅಪ್ಪಾ, ನಿನ್ನ ಅಗಲಿನ ದುಃಖವನ್ನು ಪತಿಗೃಹದಲ್ಲಿ ಹೇಗೆ ಸಹಿಸುವೆನು?' ಎಂದು ಶಕುಂತಳೆ ಕೇಳುವಳು. ಅದಕ್ಕೆ ಉತ್ತರವನ್ನು ಆತನು ಈ ಕೆಳಗಣ ರೀತಿಯಿಂದ ಕೊಡುತ್ತಿರುವನು.

ಅಭಿಜನವತೋಃಭರ್ತುಃ ಶ್ಲಾಘ್ಯೇಸ್ಥಿತಾ ಗೃಹಿಣೀ ಪದೇ
ವಿಭವಗುರುಭಿಃ ಕೃತ್ಯೈಸ್ತಸ್ಯ ಪ್ರತಿಕ್ಷಣಮಾಕುಲಾ।
ತನಯಮಚಿರಾತ್ ಪ್ರಾಚೀವಾರ್ಕಂ ಪ್ರಸೂಯ ಚ ಪಾವನಂ
ಮಮ ವಿರಹಜಾಂ ನತ್ವಂವತ್ಸೇ ಶುಚಂಗಣಯಿಷ್ಯಸಿ॥"

(ಶಾಕುಂತಲ)

"ಮಲಯ ಪರ್ವತದಿಂದ ಕಿತ್ತೊಗೆದ ಚಂದನ ಲತೆಯಂತೆ ದೇಶಾಂತರದಲ್ಲಿದ್ದು ಜೀವಧಾರಣೆಯನ್ನು ಹೇಗೆ ಮಾಡಲಿ"! ಎಂದಾಗ ಹೇಳುವ ಕಣ್ವನ ಈ ಮಾತು ಸಾಮಾನ್ಯವಾಗಿ ತವರುಮನೆಯನ್ನು ಬಿಡುತ್ತಿರುವ ಕನ್ನಿಕೆಯರೆಲ್ಲರಿಗೂ ಒಗ್ಗುವ ಮಾತು. ಉತ್ತಮ ರಾಜಕುಲವಂತನಾದ ಗಂಡನ ಹೊಗಳತಕ್ಕ ಗೃಹಿಣೀ ಸ್ಥಾನದಲ್ಲಿದ್ದು—ಅವನ ವೈಭವದಿಂದ ಮಹತ್ತೆನಿಸಿದ ಕೆಲಸಗಳಿಂದ ಪ್ರತಿಕ್ಷಣವೂ ಆಕುಲೆಯಾಗಿ ಪೂರ್ವ ದಿಶಾ ವನಿತೆ ಸೂರ್ಯನನ್ನು ಪಡೆದಂತೆ ಪಾವನನಾದ ಮಗನನ್ನು ಪಡೆದು, ನನ್ನ ಅಗಲಿನ ಶೋಕವನ್ನು ಲೆಕ್ಕಿಸಲಾರೆ; ಎಂದು ನುಡಿಯುವನು. ಉತ್ತಮ ಕುಲ. ತುಂಬಿದ ರಾಜವೈಭವವುಳ್ಳ ಗಂಡ, ಆತನ ಕೆಲಸ, ಇವುಗಳಲ್ಲಿ ಯಾವಾಗಲೂ ಚಿಂತೆ, ಆಸಕ್ತಿ, ಆ ಮೇಲೆ ಉತ್ತಮ ತೇಜೋಗುಣಭೂಯಿಷ್ಠನಾದ ಮಗನ ಇರುವಿಕೆ, ಇವುಗಳಿಂದ ಕೂಡಿದಾಗ ಹೆಣ್ಣುಮಕ್ಕಳಿಗೆ ತವರಮನೆ ನೆನವಾಗುವುದಾದರೂ ಹೇಗೆ? ಈ ಉತ್ತರವು ಸ್ತ್ರೀ ಸಮುದಾಯಕ್ಕೆ ಹೇಳಿದ್ದಾಗಿದ್ದು ಸ್ತ್ರೀ ಪ್ರಕೃತಿಯ ಜೀವನದ ಯಥಾರ್ಥ ಚಿತ್ರಣವಾಗಿದೆ. ಇಂತಹ ಸುಂದರ ಪ್ರಕೃತಿ ಚಿತ್ರಣ ಕಾಳಿದಾಸನಲ್ಲಿದೆ. ಅವುಗಳನ್ನು ಕಾಣುವುದು ಮುಖ್ಯ. ಭಾರತದ ಕಾವ್ಯ ಸಂಸ್ಕೃತಿಯ ಭಂಡಾರ ಇಂತಹ ಪ್ರಕೃತಿ ಚಿತ್ರಣದಿಂದ ತುಂಬಿ ತುಳುಕುತ್ತಿದೆ. ಅವನ್ನು ನಾವರಿತು ಬಲಿತು ಸುಖಾನಂದ ತೃಪ್ತಿಪಡೆಯಬೇಕು. ಆ ಉದ್ಯಮ ನಮ್ಮ ಉದ್ಯಮ.•

---

## ಜನನೀ ಜನಕರ ಸ್ಥಾನಮಾನಗಳನ್ನು ನಿರ್ದೇಶಿಸುವ ಕಾಳಿದಾಸ

'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ' ಎಂದು ತಾಯಿ ಮತ್ತು ಹುಟ್ಟುನಾಡಿನ ಮೇಲೆ ತೋರತಕ್ಕ ಅಭಿಮಾನ ಗೌರವ ಕರ್ತವ್ಯ ಪರಿಪಾಲನೆಗಳ ಕುರಿತು ಕವಿಗಳು ಹೇಳಿರುವರಾದರೂ ತಾಯಿ ತಂದೆಗಳ ಸ್ಥಾನಮಾನಗಳ ಕುರಿತು ಕಿರಿಯ ನುಡಿಯಲ್ಲಿ ಹೇಳಿದವರು ತೀರಾ ವಿರಳ. ತಾಯಿ ಮತ್ತು ತಾಯಿನಾಡು ಇವೆರಡು ಮಾನವನಿಗೆ ಸ್ವರ್ಗಕ್ಕಿಂತಲೂ ಮೇಲು ಎಂಬ ಈ ನುಡಿ ಹಬ್ಬಿದ ನುಡಿ. ನಾವು ತಾಯಿಯನ್ನು ಯಾವ ದೃಷ್ಟಿಯಿಂದ ಕಾಣಬೇಕು; ನಮ್ಮ ಸೇವೆಯು ಯಾವ ತರಹದ್ದಿರಬೇಕು; ಎಂಬುದು ಈ ಮಾತಿನಿಂದಲೇ ಊಹಿಸಿ ತಿಳಿಯತಕ್ಕುದಾಗಿದೆ.

ತಾಯಿಗಾಗಿ, ತಾಯಿನಾಡಿಗಾಗಿ ಸಲ್ಲಿಸುತ್ತಿರುವ ಸೇವೆಯು ಎಷ್ಟಾದರೂ ಅಲ್ಪ. ತಾಯಿನಾಡ ಮೇಲೆ ಅಭಿಮಾನಾದರಗಳನ್ನು ತೋರದ ಕರ್ತವ್ಯಗಳೇ ನಮ್ಮಲ್ಲಿ ಅಧಿಕವಾಗಿ ಕಾಣಬರುತ್ತಿರುವುವು. ಅಲ್ಲವಾದರೆ ಕಾಣಬರುತ್ತಿರುವ ಜಾತೀಯವಾದ, ದೇಶದ ಹಂಚುವಿಕೆ, ಹಂಚುವಿಕೆಯಾದ ಮೇಲೂ ಭಿನ್ನತೆ ಇವೇ ಕಾಣಬರುತ್ತಿರುವವೇಕೆ? ಅಣ್ಣತಮ್ಮಂದಿರೆಂಬ ಭಾವನೆ ನಮಗಿಲ್ಲ. ಇವುಗಳ ವಿನಾ ಧನ ತೃಷ್ಣೆಯಿಂದ ತೋರುತ್ತಿರುವ ವರ್ತನೆಗಳೆಂತಹವು? ಇವು ತಾಯಿನಾಡಿನ ಮೇಲೆ ತೋರುತ್ತಿರುವ ಅಭಿಮಾನದಿಂದಿರಬಹುದು! ಸೇವೆಯಾಗಿರಬಹುದು!

ಕವಿಗಳು ಜನತೆಯ ಹಿತಕ್ಕಾಗಿಯೇ ಕಾವ್ಯಗಳನ್ನು ರಚಿಸುವರು. ಕವಿಗಳ ಸಂದೇಶ ನಾಡಿನ ಮೇಲ್ಮೆಗಾಗಿ. ಭಾರತದ ಕವಿಗಳೆಲ್ಲಾ ನಾಡಿನ ಹಿತಸಾಧನೆಯ ಗ್ರಂಥಗಳನ್ನು ಬರೆದು ಅಮರರಾಗಿದ್ದಾರೆ. ಅವರ ಕೀರ್ತಿ ಸೂರ್ಯ ಚಂದ್ರರ ತನಕ ಚಿರಸ್ಥಾಯಿಯಾಗಿ ಉಳಿವಂತಾಗಿದೆ. ಕವಿಗಳು ಪ್ರಕೃತಿಯ ಉಪಾಸಕರು. ಉಪಾಸನಾ ದೃಷ್ಟಿಯೇ ಪ್ರಕೃತಿಯ ಮೇಲೆ. ಆದರೆ ಇಂದಿನ ಹಲವು ಕವಿಗಳಲ್ಲಿ ಕಾಮಭಾವನೆಯೇ ಕಾಣಬರುತ್ತಿರುವುದು ಸೋಜಿಗ.

ದೇಶದ ಮೇಲೆ ತೋರುವ ಗೌರವ ಕೀಳಾಗಿದೆ. ಅಧಿಕಾರ ಲಾಲಸೆಗಾಗಿ ಹಲವರು ದೇಶಸೇವಕರೆನಿಸುವರು. ಕವಿಗಳೂ ತಾನೊಬ್ಬ ಕೃತಿಗಾರ

ನೆಂಬ ನಾಮಾಂಕಿತನಾಗುವುದಕ್ಕಾಗಿ ಹಲವು ಬಗೆಯ ಕೃತಿಗಳನ್ನು ರಚಿಸುತ್ತಿರುವರು. ಕವಿಗಳ ಕೃತಿ ಉಜ್ವಲ ಭಾವನೆಯನ್ನು ತುಂಬುವುದಕ್ಕಾಗಿ, ಮತ್ತು ಅಭಿಮಾನ ಕರ್ತವ್ಯಗಳನ್ನು ಸಲ್ಲಿಸುವುದಕ್ಕಾಗಿರುವುದು. ಇಂದಿನ ಕೃತಿಗಾರರು ತಾಯನ್ನೇ ಹರಸುವ ಗೋಜಿಗೆ ಹೋದಂತೆ ಕಂಡುಬರುತ್ತಿರುವುದು. 'ಅಳ್, ಕನ್ನಡದ ತಾಯ್ ಬಾಳ್ ಕನ್ನಡದ ತಾಯ್' ಈ ತೆರಹದ ಕೃತಿಗಳು ಹಲವಾರುಗಳಿವೆ. ತಾಯಿಯಿಂದ ಆಶೀರ್ವಾದ ಪಡೆವುದು, ಇಷ್ಟಾರ್ಥವನ್ನು ಕೇಳಿಕೊಳ್ಳುವುದಲ್ಲದೆ ಉಳಿದ ವಿಚಾರಗಳು ಕವಿ ಮಾರ್ಗ ದೃಷ್ಟಿಯಿಂದ ಗ್ರಾಹ್ಯಗಳಲ್ಲ.

ಕವಿಪುಂಗವನಾದ ಕಾಳಿದಾಸನು ತಾಯಿತಂದೆಗಳ ಸ್ಥಾನವು ಎಂತಹುದು? ನಾವು ಅವರಲ್ಲಿ ತೋರತಕ್ಕ ಭಾವನೆ ಕರ್ತವ್ಯಗಳು ಎಂತಹವು ಎಂಬುದನ್ನು ಮನಕ್ಕೆ ಬರುವಂತೆ ತನ್ನ 'ರಘುವಂಶ'ದಲ್ಲಿ ಮಾಡಿರುತ್ತಾನೆ. 'ರಘುವಂಶ' ಕಾಳಿದಾಸನ ಕೃತಿಗಳಲ್ಲಿ ಒಂದು ವಿಶಿಷ್ಟ ಕೃತಿ. ಇದರಲ್ಲಿ ಪಡೆಯತಕ್ಕ ವಸ್ತುಗಳು ಎಂತಹವೆಂಬುದನ್ನು ಕಾಳಿದಾಸನೇ ಉಲ್ಲೇಖಿಸಿರುವನು.

ಗುರ್ವರ್ಥಮರ್ಥೀಶ್ರುತಪಾರ ದೃಶ್ವಾರಘೋಃ ಸಕಾಶಾದನವಾಪ್ಯಕಾಮಂ।
ಗತೋವದಾನ್ಯಾಂತರಮಿತ ಯಂ ಮೇ ಮಾಭೂತ್ಪರೀವಾದ ನ ವಾವತಾರಃ ॥
(ರಘುವಂಶ)

ರಘು ಮಹಾರಾಜನು ವಿಶ್ವಜಿತ್ ಯಾಗವನ್ನು ಕೊನೆಗೊಳಿಸಿದ್ದನು. ಆತನು ತನ್ನ ಸರ್ವ ಸಂಪತ್ತುಗಳನ್ನೂ ಬಡವರಿಗೆ ಕೊಟ್ಟು, ಯಾಚಕರನ್ನು ತಣಿಸಿ ಬರಿಗೈಯಿಂದ ಇದ್ದನು. ಮನೆಯಲ್ಲಿ ಮಣ್ಣು ಮಡಕೆಗಳೇ ಆ ಬಳಿಕ ಬಂದಿದ್ದುವು. ಇಂತಹ ಸಮಯದಲ್ಲಿ ವರತಂತು ಮಹರ್ಷಿಯ ಶಿಷ್ಯನು ಗುರು ದಕ್ಷಿಣೆಯನ್ನು ಕೇಳಲು ಅಲ್ಲಿಗೆ ಬಂದನು. ವರತಂತು ಅಂದಿನ ಶ್ರೇಷ್ಠ ಆಚಾರ್ಯ. ಆಚಾರ್ಯನಲ್ಲಿ ಎಲ್ಲಾ ವಿದ್ಯೆಗಳನ್ನು ಪಡೆದನು. ವೇದದ ಕೊನೆಯನ್ನು ನೋಡಿದನು. ಆತನು ಗುರ್ವರ್ಥವನ್ನು ಬೇಡಲಾಗಿ ಬಂದನು. ರಘುವಿನಲ್ಲಿ ತನಗೆ ಬೇಕಾದ ಮಹಾ ಅರ್ಥಸಂಪತ್ತು ದೊರಕದೆ ಬೇರೆ ದಾನಿಯನ್ನು ಹುಡುಕಹೋದನು, ಎಂಬ ಅಪವಾದವು ತನಗೆ ಉಂಟಾಗಕೂಡದು, ಎಂಬ ಮಾತನ್ನು ಕಾಳಿದಾಸನು ಹೇಳಿರುವನಾದರೂ ಈ ಮಾತು ಆತನ ಗ್ರಂಥಕ್ಕೇ ಒಪ್ಪುತ್ತಿದೆ. ಕಾಳಿದಾಸನ ಈ ಗ್ರಂಥದಲ್ಲಿ ವೇದ ಪಾರಂಗತನಾದ ಮನುಷ್ಯನೂ ಹೊಂದತಕ್ಕ ಮಹಾರ್ಥ ಸಂಪತ್ತಿದೆ. ರಘುವಂಶದಲ್ಲಿ

ವೇದಾಂತಿಗಳೂ ಪಡೆಯತಕ್ಕ ಜ್ಞಾನ ಸಂಪತ್ತು ಇದೆ. ಇದನ್ನು ಬಿಟ್ಟು ಜ್ಞಾನ ಸಂಪತ್ತಿಗೆ ಬೇರೆ ಗ್ರಂಥಗಳನ್ನು ಹುಡುಕಹೋಗುವ ಗೊಡವೆಯನ್ನುಂಟುಮಾಡುವ ಅಪವಾದ ತನಗೆ ಉಂಟಾಗಕೂಡದು ಎಂಬುದಾಗಿಯೇ ಕಾಳಿದಾಸನು ಧ್ವನಿಯಿಂದ ಹೇಳಿರುವನು. ಕಾಳಿದಾಸನ ರಘುವಂಶ ಕಾವ್ಯವು ಇಂತಹ ಜ್ಞಾನ ಸಂಪತ್ತಿಗೆ ನಿಧಿಯಾಗಿದೆ. ಅವನ್ನು ಕಂಡುಕೊಳ್ಳುವ ಶೋಧಿಸುವ ಶಕ್ತಿಯು ನಮಗೆ ಬೇಕು. ಇಲ್ಲದೆ ಅವನ್ನು ಕಾಣಲಾಗುವುದಿಲ್ಲ. ಈ ಗ್ರಂಥದಲ್ಲಿ ತಾಯಿ–ತಂದೆಗಳ ಸ್ಥಾನವನ್ನು ಮೊದಲನೆಯ ಪದ್ಯದಲ್ಲಿ ನಿರ್ದೇಶಿಸಿರುವನು. ಆ ಪದ್ಯವಿಂತಿದೆ:

'ವಾಗರ್ಥಾವಿವ ಸಂಪೃಕ್ತೌ ವಾಗರ್ಥ ಪ್ರತಿಪತ್ತಯೇ।
ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ॥

(ರಘುವಂಶ)

'ಮಾತು ಮತ್ತು ಅರ್ಥದ ಸಿದ್ಧಿಗಾಗಿ ನುಡಿ ಮತ್ತು ಅರ್ಥದಂತೆ ಸೇರಿಕೊಂಡಿರುವ ಲೋಕದ ತಾಯಿ ತಂದೆಗಳಾದ ಪಾರ್ವತಿ ಪರಮೇಶ್ವರರನ್ನು ವಂದಿಸುತ್ತೇನೆ' ಎಂದು ಕಾಳಿದಾಸನು ಮೊದಲಾಗಿ ಬೇಡಿಕೊಳ್ಳುವನು. ಈ ಪದ್ಯದಲ್ಲಿ ಜಗತ್ತಿನ ತಾಯಿತಂದೆಗಳಾದ ಪಾರ್ವತೀ ಪರಮೇಶ್ವರರನ್ನು ಸ್ತುತಿಸಿರುವನು. ಜಗತ್ತಿನ ತಾಯಿತಂದೆಗಳಾದ ಪಾರ್ವತೀ ಪರಮೇಶ್ವರರು ಮಾತು ಮತ್ತು ಅದರ ಅರ್ಥದಂತೆ ಇರುವವರು ಎಂದು ಮೊದಲಾಗಿ ಹೇಳಿರುವನು. ಈ ನುಡಿಯಲ್ಲಿ ಜನನೀ ಜನಕರ ಯಥಾರ್ಥ ಸ್ಥಾನ ಮಾನಗಳನ್ನು ತೋರಿಕೊಟ್ಟಿರುವನು. ನುಡಿಯನ್ನು ಬಿಟ್ಟು ಅರ್ಥವಿಲ್ಲ; ಅರ್ಥವನ್ನು ಬಿಟ್ಟು ನುಡಿಯಿಲ್ಲ. ನುಡಿ ಅರ್ಥಸಂಪತ್ತಿಗಾಗಿ. ನುಡಿ ಅದರ ಅರ್ಥ ಇವೆರಡೂ ಮಾನವನ ಇಷ್ಟಸಂಪತ್ತಿನ ಸಿದ್ಧಿಗಾಗಿ. ಲೋಕದ ಹೆತ್ತವರು ನಾಡಿನ ಇಷ್ಟ ಸಂಪತ್ತಿಗಾಗಿ ಉಳ್ಳವರು. ತಾಯಿ ತಂದೆಗಳು ಮಕ್ಕಳನ್ನು ಉತ್ತಮ ಅರ್ಥ ಸಂಪತ್ತುಗಳಿಸುವಂತೆ ಮಾಡಬೇಕು. ಹೆತ್ತವರ ಕರ್ತವ್ಯ ಉತ್ತಮ ಸಂಪತ್ತನ್ನು ಕೊಡುವ ಮಕ್ಕಳನ್ನು ಕೊಡುವುದಕ್ಕೆ. ಜಗತ್ತಿನ ಹಿತಸಾಧನೆಯನ್ನುಂಟುಮಾಡುವ ಹೆತ್ತವರು ಬೇಕು. ಇಂತಹ ಅರ್ಥ ಸಂಪತ್ತಿಗೆ ಕಾರಣರಾದ ಜನನೀ ಜನಕರು ಬೇಕು. ತಾಯಿ ತಂದೆಗಳು ನುಡಿ ಮತ್ತು ಅರ್ಥದಂತೆ ಕೂಡಿದವರಾಗಿರಬೇಕು. ಮಾತು ಅರ್ಥ ಇವೆರಡೂ ಅಭಿನ್ನಗಳು. ಅಭಿನ್ನಗಳಾಗಿದ್ದು ಮಾನವನ ಇಷ್ಟಾರ್ಥ ಸಂಪತ್ತನ್ನು ಕೊಡುತ್ತವೆ. ನುಡಿ ಇಷ್ಟ ಸಿದ್ಧಿಗಾಗಿ. ತಾಯಿ ತಂದೆಗಳು ನುಡಿ ಅರ್ಥಗಳಂತೆ ಭಿನ್ನರಾಗಿ

ಕಂಡರೂ ಮಕ್ಕಳಿಗೆ ಏಕ ಸ್ವರೂಪದಂತೆ ಕಾಣತಕ್ಕವರು. ಜನನೀ ಜನಕರು ಏಕತೆಯ ನೆಲೆಯಿಂದಿದ್ದು ಮಕ್ಕಳಿಗೆ ಅಭಿನ್ನರಾಗಿಯೇ ತೋರಿದರೆ ಹಿತ ಸಿದ್ಧಿಗಾಗುವುದು. ತಂದೆಯು ಮತ್ತು ತಾಯಿಯ ಉದ್ದೇಶ ಸಾಧನೆ ಒಂದಾ ಗಿರಬೇಕು. ಜನನೀ ಜನಕರು ಈ ಬಗೆಯ ನೆಲೆಯಿಂದಿದ್ದು ಜಗತ್ತಿನ ಇಷ್ಟ ಸಿದ್ಧಿಯನ್ನೂ ಮಕ್ಕಳ ಇಷ್ಟಸಂಪತ್ತನ್ನೂ ಕೊಡುವವರಾಗುವುದು ಮುಖ್ಯ. ಜಗತ್ತಿನ ಹಿತದ ಬಳಸುವಿಕೆಯ ದುಡಿಮೆಗೆ ತಾಯಿತಂದೆಗಳೇ ಕಾರಣರಾಗು ತ್ತಾರೆ. ಇದನ್ನು ಮರೆತ ಜನನೀ ಜನಕರು ನಮ್ಮ ಮುಂದೆ ಕಾಣುತ್ತಾರೆ. ಈ ಪದ್ಯದಲ್ಲಿ ವೇದಾಂತ ವಿಚಾರವೂ ಅಡಗಿದೆ. ಅದು ನಮಗೆ ಪ್ರಕೃತೋ ಪಯುಕ್ತವಲ್ಲ. ನಮ್ಮ ನಾಡಿನ ಹೆತ್ತವರು ಈ ಬಗೆಯ ಹೊಣೆಯನ್ನೂ ಹೊತ್ತು ಬೆಳಗಲಿ.

---

# ರಾಷ್ಟ್ರಜಾಗ್ರೃತಿಯನ್ನೊರೆದ ಕಾಳಿದಾಸ

ಕವಿಯು ಸಮಾಜದ ಪ್ರತಿನಿಧಿ. ಪ್ರತಿನಿಧಿಯಾಗಿದ್ದು ಜನತೆಯ ಹೃದಯ ಭಾವನೆಯನ್ನು ಸಾರುತ್ತಿರುವನು. ಕವಿಯು ಸಮಾಜದ ಮಸ್ತಿಷ್ಕವೂ ಅಹುದು. ಅವರ ಬಾಯಿಯೂ ಹೌದು. ಇವೆರಡೂ ಆತನಾಗಿದ್ದು ತಲೆಯ ವಿಚಾರವನ್ನು ತನ್ನ ಮುಖದಿಂದ ಹೊರಗೆಡುಹುತ್ತಾನೆ. ದೇಶದ ಜಾಗೃತಿಯ ನುಡಿಯನ್ನು ಉದ್ಘೋಷಿಸುತ್ತಾನೆ. ರಾಷ್ಟ್ರಕ್ಕೆ ಕಲ್ಯಾಣವನ್ನು ಸಾಧಿಸಲಿರುವ ಸಂದೇಶ ಕೊಡುತ್ತಾನೆ. ಆ ಸಂದೇಶವನ್ನು ತಿಳಿದು, ಒಂದಿಗೆ ಜನತೆಯ ಮನೋವೃತ್ತಿಯನ್ನೂ ಅವರ ಹಿತಾಭಿಲಾಷೆಯನ್ನೂ ತಿಳಿದು, ಅದನ್ನು ಸಾಧಿಸುವುದು ಜಾಗೃತಿಗೊಂಡ ಮಾನವನ ಕರ್ತವ್ಯ. ಇಂತಹ ಕರ್ತವ್ಯದ ಪಾಲು ಇಂದು ನಮ್ಮೆಲ್ಲರಲ್ಲೂ ಇದೆ. ಆ ಕರ್ತವ್ಯದ ಸಾಧನೆಯನ್ನು ಮಾಡುವಾಗ ಕವಿಗಳ ಸಂದೇಶವೇನೆಂದು ತಿಳಿದುಕೊಳ್ಳುವುದು ಪ್ರಧಾನ. ಇದನ್ನು ಕಾವ್ಯಾಭ್ಯಾಸದಿಂದಲೇ ಪಡೆಯಲು ಸಾಧ್ಯ.

ಕವಿಯಂತೆ ಲೇಖಕನೂ ಸಮಯದ ಪ್ರತಿನಿಧಿಯಾಗಿರುವನು. ಕವಿ ಮತ್ತು ಲೇಖಕ ಇವರಿಬ್ಬರೂ ಅಭಿನ್ನರು. ಏಕರೇ ಆಗಿದ್ದು ನಾಮದ್ವಯದಿಂದ ಭಿನ್ನರಾಗಿ ಕಾಣಬರುತ್ತಾರೆ. ಕವಿಯು ತನ್ನ ಬಾಳುವೆಯ ಕಾಲದಲ್ಲಿ ಯಾವ ವಿಧದ ಸಮಯಗತಿಯ ಮಾನಸಿಕ ಆಹಾರ ಸಾಮಗ್ರಿಯನ್ನು ಹೊಂದುವನೋ ಅದಕ್ಕನುಗುಣವಾದ ಕೃತಿಯು ಅವನಿಂದ ಹುಟ್ಟುತ್ತದೆ. ಹುಟ್ಟುವ, ಕೃತಿ ಮಾನಸಿಕ ಆಹಾರ ಸಂಪತ್ತನ್ನು ಹೊಂದಿದೆ. ಆಕಾಶವಾಣಿಯ ಗ್ರಾಹಕವು (Receiver) ಆಕಾಶ ಮಂಡಲದಲ್ಲಿ ಸಂಚರಿಸುತ್ತಿರುವ ವಿದ್ಯುತ್ ತರಂಗಗಳನ್ನು–ಹಿಡಿದು ಅವುಗಳಿಗೆ ನುಡಿಯ ಶಬ್ದದ ಆಕಾರವನ್ನು ಕೊಡುವುದು. ಇಂತೆಯೇ ಕವಿಯು ತನ್ನ ಕಾಲದ ವಾಯುಮಂಡಲದಲ್ಲಿ ಸಂಚರಿಸುತ್ತಿರುವ ವಿಚಾರ ಭಾವನೆಗಳನ್ನು ಹೇಳತೊಡಗುತ್ತಿರುವನು. ಕವಿ ಯಾವುದನ್ನು ನುಡಿಯುವನೋ ಅದನ್ನು ಜನತೆ ಅನುಭವಿಸುತ್ತಿರುವುದು. ಕವಿಯ ನುಡಿಯಲ್ಲಿ ಜನತೆಯ ಹೃದಯದ ಚೇತನತೆಯು ಇದೆ. ಕಂಪನೆಯು ನೆಲಸಿದೆ.

ಕವಿ ಹೇಳಿದ ವಿಚಾರವನ್ನು ಸಮಾಜವು ತಿಳಿಯುತ್ತದೆ. ಸಂಪೂರ್ಣವಾಗಿ ಸಮಾಜ, ಅರಿಯುವುದಾದರೂ ಅದನ್ನು ತನ್ನ ಮಾತಿನಿಂದ ಹೇಳಲಾರದು.

ಹೇಳುವ ಶಕ್ತಿ ಕವಿಯಂತೆ-ಲೇಖಕನಂತೆ ಸಮಾಜಕ್ಕಿಲ್ಲ. ಕವಿ ಕೆಲವು ವಿಚಾರಗಳನ್ನು ಅಪೂರ್ಣವಾಗಿ ಹೇಳಿಬಿಡುವನು. ಅವುಗಳ ಚಿತ್ರ ಅಪೂರ್ಣವಾಗಿದ್ದರೂ ಜನರ ಹೃದಯದಲ್ಲಿ ಪೂರ್ಣಗೊಳ್ಳುತ್ತದೆ. ಆ ಪೂರ್ಣಗೊಂಡ ಚಿತ್ರಮೂರ್ತಿ ಜನರಿಗೆ ಮಾರ್ಗದರ್ಶಕವಾಗುವುದು. ಮಾರ್ಗದರ್ಶಕವೆನಿಸಿ ಸಮಾಜದ ಉನ್ನತಿಯನ್ನು ಸಾಧಿಸುವುದರೊಂದಿಗೆ ಇತಿಹಾಸ ರಚನೆಯನ್ನೂ ಮಾಡುವುದು.

ಕಾಳಿದಾಸನ ಕಾಲ ಬೇರೆ. ಇಂದಣ ಕಾಲ ಬೇರೆ. ಅಂದಿನಿಂದ ಇಂದಿಗೆ ಎಷ್ಟೋ ಶತಮಾನಗಳಾದವು. ಗತ ಶತಮಾನಗಳ ಎಡೆಯಲ್ಲಿ ಎಷ್ಟೋ ಏರುತಗ್ಗುಗಳಾದವು. ಉಂಟಾದ ಏರುತಗ್ಗುಗಳು ಭಾರತ ಸಮಾಜದ್ದು. ಭಾರತ ಸಮಾಜವು ಅಂದಿನಿಂದ ಇಂದುವರೆಗೂ ಕವಿಗಳ ಚೇತೋವಾಣಿಯಿಂದ ತಮ್ಮ ಹೃದಯ ಭಾವನೆಯನ್ನು ಹೇಳಗೊಟ್ಟಿದೆ. ಜನರ ಚೇತೋ ಭಾವನೆಯನ್ನು ಹೇಳ ಹೊರಡುವ ಕವಿ ಸಂಪೂರ್ಣ ಮನಶ್ಶಾಸ್ತ್ರಜ್ಞನು. ಮನಸ್ಸಿನಲ್ಲಿ ನಡೆಯುವ ವಿಚಾರಗಳು ಅವಾವವು, ಅವುಗಳಿಂದ ಉಂಟಾಗುವ ಪರಿಣಾಮವೇನು ಎಂಬುದೂ ಕವಿಗಳಿಗೆ ತಿಳಿದಿದೆ. ರಾಷ್ಟ್ರದ ಹಿತಜನಕ ವ್ಯಕ್ತಿಗಳನ್ನು ಹಳಿದರೆ ಅದರಿಂದ ರಾಷ್ಟ್ರಕ್ಕೆ ಹಾನಿ ಇದೆ. ರಾಷ್ಟ್ರದಲ್ಲಿ ಇಂತಹ ವ್ಯಕ್ತಿಗಳು ಕಾಣಬರುತ್ತಿರುವರು. ಇದನ್ನು ಕಾಳಿದಾಸನು ಬಲ್ಲವನಿದ್ದಾನೆ. ರಾಷ್ಟ್ರದ ವ್ಯಕ್ತಿಗಳಲ್ಲಿ ಆವನು ಮಹಾಪುರುಷನಿರುವನೋ ಅವನನ್ನು ಹಳಿಯು ಹೋಗುವ ವ್ಯಕ್ತಿಗಳ ಕುರಿತು—ಅದನ್ನು ಕೇಳುವ ವ್ಯಕ್ತಿಗಳ ಕುರಿತು ಕಾಳಿದಾಸನು ತನ್ನ 'ಕುಮಾರ ಸಂಭವ'ದಲ್ಲಿ ಹೇಳಿರುವನು. ಮಹಾಪುರುಷರ ಚರಿತ್ರೆಯನ್ನು ಮಂದಮತಿಗಳು ದ್ವೇಷಿಸುವರು. ಮಹಾಪುರುಷರನ್ನು ಹಳಿವವ ಮಾತ್ರವಲ್ಲ, ಅದನ್ನು ಕೇಳುವವ ಅವನಿಗಿಂತಲೂ ಪಾಪಭಾಗಿಯಾಗುತ್ತಾನೆ ಎಂದು ಆತನು ಹೇಳಿರುವನು.

ಅವನ ಪದ್ಯ ವಚನಗಳು ಇಂತಿವೆ: **'ದ್ವಿಷಂತಿ ಮಂದಾಶ್ಚರಿತಂ ಮಹಾತ್ಮನಾಂ'** ಅಲ್ಪಮತಿಗಳು ಮಹಾಪುರುಷರ ಚರಿತ್ರೆಯನ್ನು ದೂಷಿಸುತ್ತಾರೆ; ಎಂದು ಪಾರ್ವತಿಯು ವಟುವಾಗಿ ಬಂದ ಶಿವನಿಗೆ ಹೇಳುವಳು. ಶಿವನು ಬ್ರಹ್ಮಚಾರಿಯ ವೇಷದಲ್ಲಿ ಬಂದು—ಪಾರ್ವತಿಯು ಯಾವುದಕ್ಕಾಗಿ ತಪಸ್ಸನ್ನು ಮಾಡುವಳು, ಈ ಸಮಾಧಿಯ ಉದ್ದೇಶ ಸಾಧನೆಗಾಗಿ ನಾನೂ ಸಂಗ್ರಹಿಸಿದ ತಪ್ಪಸ್ಸಿನ ಫಲವನ್ನು ಕೊಡಲು ಸನ್ನದ್ಧನಿರುವೆನು. ಹೇಳುವು

ದಕ್ಕೆ ಆವ ಸಂಕೋಚವೂ ಇರದಿದ್ದರೆ ತಪಸ್ಸಿನ ಉದ್ದೇಶವೇನೆಂದು ತಿಳಿಸಬೇಕು--ಎಂದು ಪಾರ್ವತಿಯೊಡನೆ ಕೇಳಿಕೊಂಡನು. ಆಗ ತನ್ನ ಗೆಳತಿಗೆ ಪಾರ್ವತಿ ತಪಸ್ಸಾಧನೆಯ ಬಗೆಯನ್ನು ಸೂಚಿಸುವಂತೆ ಸನ್ನೆಗೆಯ್ದಳು. ಗೆಳತಿಯು ಪಾರ್ವತಿಯ ತಪಶ್ಚರಣೆ ಈಶ್ವರನ ಪ್ರಾಪ್ತಿಗಾಗಿ; ಈಕೆ ತನ್ನ ಮುಂದೆ ಕಾಮದಹನವಾದ ಬಳಿಕ ತನ್ನ ಯೌವನವನ್ನೂ ರೂಪವನ್ನೂ ಹಳಿದು ದೂರಗತನಾದ ಪಿನಾಕಿಯನ್ನು ಹೊಂದುವುದಕ್ಕಾಗಿ ಈ ತಪಸ್ಸಿನ ಆಚರಣೆಗೆ ಹೊರಟಿದ್ದಾಳೆ. ಪ್ರಿಯನ ಸುಖ ಸೌಭಾಗ್ಯ ಪ್ರಾಪ್ತಿಗಾಗಿರುವ ಸೌಂದರ್ಯವನ್ನು ಅದಕ್ಕಾಗಿಯೇ ವಿಫಲಗೊಳಿಸಿ ಈ ಉದ್ಯಮ ಸಾಧನೆಗೆ ಹೊರಟಿದ್ದಾಳೆ; ಎಂದು ಮೊದಲಾಗಿ ಸಂಪೂರ್ಣ ವಿಚಾರವನ್ನು ತಿಳುಹಿದಳು. ಕೂಡಲೇ ಬ್ರಹ್ಮಚಾರಿಯಾಗಿ ಬಂದ ಶಿವನು—

'ವಪುರ್ವಿರೂಪಾಕ್ಷಮಲಕ್ಷ್ಯಜನ್ಮತಾ ದಿಗಂಬರತ್ವೇನ ನಿವೇದಿತಂ ವಸು।
ವರೇಷು ಯದ್ಬಾಲಮೃಗಾಕ್ಷಿಮೃಗ್ಯತೇ ತದಸ್ತಿ ಕಿಂ ವ್ಯಸ್ತಮಪಿ ತ್ರಿಲೋಚನೇ'

ಎಂದಿತ್ಯಾದಿಯಾಗಿ ಬಹಳವಾಗಿ ಶಿವನನ್ನು ಹಳಿಯುವನು. "ಎಲೆ ಪಾರ್ವತಿ! ಶಿವನ ದೇಹಸೌಂದರ್ಯವನ್ನೇನೆನ್ನಲಿ. ಆತನು ವಿರೂಪಾಕ್ಷ. ಇದರಿಂದಲೇ ಆತನ ಚೆಲುವು ತಿಳಿಯಬರುವುದು. ಕಣ್ಣೇ ವಿರೂಪವಾಗಿರಲು ಮತ್ತೆ ಹೇಳಬೇಕೇ? ಕುಲದ ಹುಟ್ಟನ್ನು ಯಾರೂ ತಿಳಿದಿಲ್ಲ. ಕುಲಗೋತ್ರವಿಲ್ಲದಾತ. ದಿಗಂಬರನಾಗಿದ್ದು ಬಾಳುವನು. ಇದರಿಂದಲೇ ಆತನ ಧನ ಸೌಭಾಗ್ಯ ತಿಳಿಯಬರುವುದು. ಕನ್ನೆಯರು ಗಂಡನಲ್ಲಿ ಎಳಸುವ ಒಂದಾದರೂ ಗುಣ ಆತನಲ್ಲಿರುವುದೇ?" ಎಂದು ಹಳಿದರೂ ಪಾರ್ವತಿ ಶಿವನಿಗೆ ಸರಿಯಾಗಿಯೇ ಉತ್ತರಿಸುವಳು. ಆಕೆಯ ಉತ್ತರಗಳು ಬ್ರಹ್ಮಚಾರಿಯ ಬಾಯನ್ನು ಮುಚ್ಚಿಬಿಡುವವು. ಬ್ರಹ್ಮಚಾರಿಯ ಉಸಿರಿಲ್ಲದಾಗುವುದು. ಕೊನೆಗೆ ಆಕೆ ಜಗತ್ತೇ ಶರಣುಗೊಂಡು ನಿಂದಿರುವ ಆತನಿಗೆ ಈ ಆಶೆಯ ವಿಚಾರ ಸಂಪತ್ತುಗಳೇಕೆ? ನಿರಾಶನಾಗಿ ಆತನಿರುವನು. ಮಹಾಪುರುಷನಾದ ಆ ಶಿವನ ವಿಚಾರವಾಗಿ ತಿಳಿದವರಾರಿರುವರು? ಈ ಪಾಪದ ನುಡಿಯನ್ನೆತ್ತಬೇಡ. **'ನ ಕೇವಲಂ ಮಹತೋಽಪಭಾಷತೇ ಶೃಣೋತಿ ತಸ್ಮಾದಪಿಯಃ ಸಪಾಪಭಾಕ್'** ಮಹಾಪುರುಷರ ಕುರಿತು ಅನುಚಿತವಾದ ಅಪಭಾಷಣವನ್ನು (ಅಪಮಾನಜನಕ ಹೀನ ಮಾತುಗಳನ್ನು) ನುಡಿವವನು ಮಾತ್ರವಲ್ಲ; ಅದನ್ನು ಕೇಳುವವರು ಅವನಿಗಿಂತಲೂ ಪಾಪಕ್ಕೆ ಭಾಗವನ್ನು

ಹೊಂದುತ್ತಾರೆ-ಎಂದು ಉತ್ತರಿಸಿಯೇ ಬಿಟ್ಟಳು. ಶಿವನು ಬಾಯಿಕಟ್ಟಿ ಹೋದನು. ಈ ನುಡಿಯೇ ಕೊನೆಗೆ ಸಾಕಾಯಿತು. ಮಹಾದೇವನು ಎಂತಹ ವ್ಯಕ್ತಿ! ನಮ್ಮ ಜನತೆಯಲ್ಲಿ ಶಿವನನ್ನು ಬ್ರಹ್ಮಚಾರಿ ಹಳಿದಂತೆ—ಹೇಯವಾಗಿ ನುಡಿದಂತೆ—ನುಡಿವವರಿದ್ದಾರೆ. ದೇಶದ ಮುಖಂಡರನ್ನೂ ಮುಂದಾಳುಗಳನ್ನೂ ದೂಷಿಸುವವರಿರುವರು.

ಇಂದು ಕೆಲವು ತಂಡಗಳು ದೇಶದಲ್ಲಿ ತಲೆ ಎತ್ತಿ ಒಂದೊಂದು ತಂಡವು ಬಾಯಿಗೆ ಬಂದಂತೆ ದೇಶ ರಕ್ಷಣೆಯ ಹೊಣೆ ಹೊತ್ತ ಮತ್ತು ದೇಶದ ಹಿತ ಸಾಧನೆಗಾಗಿ ಸರ್ವಸ್ವವನ್ನೂ ಧಾರೆಯೆರೆದ ಮಹಾಪುರುಷರನ್ನು ದೂಷಿಸುವುದುಂಟು. ಈ ದೂಷಣೆಯು ಪಾಪಕೃತ್ಯ. ಅಲ್ಲಸಲ್ಲದ ಆರೋಪದ ನುಡಿ. ಅಧಿಕಾರಲಾಲಸೆಯ-ಭೋಗ ತೃಷ್ಣೆಯ ಅಂಧ ದೃಷ್ಟಿಯ ಭಾಷಿತಗಳು.

ಗಾಂಧೀಜಿ ಔರಂಗಜೇಬನ ಅಪರಾವತಾರವೆಂದವರುಂಟು. ಕಾಳಿದಾಸನು ಇಂತಹ ಮನೋವರ್ತನೆಯವರನ್ನು ಕುರಿತು ರಾಷ್ಟ್ರಹಿತಕ್ಕಾಗಿಯೇ ಈ ನುಡಿಗಳನ್ನು ಸಾರಿದ್ದಾನೆ. ಈ ನುಡಿ ಇಂದು ನಮಗೆ ಸಮಂಜಸವಾಗಿ ತೋರದೇ?

ಧರ್ಮದ ಕುರಿತು ನುಡಿಯುವವರಿಗೆ- "**ಸ್ವಧರ್ಮೇ ನಿಧನಂ ಶ್ರೇಯಃ**" ಎಂಬ ಭಾವನೆಯನ್ನೇ ಶಾಕುಂತಳಾ ನಾಟಕದಲ್ಲಿ-

ಸಹಜಂ ಖಲು ಯದ್ವಿನಿಂದಿತಂ ನ ಖಲು ತತ್ಕರ್ಮವಿವರ್ಜನೀಯಂ।
ಪಶು ಮಾರಣ ಕರ್ಮ ದಾರುಣೋಽನುಕಂಪಾ ಮೃದುರೇವ ಶ್ರೋತ್ರಿಯಃ॥

ಎಂದು ನುಡಿದಿರುವನು. "ಆವ ಕೆಲಸವೇ ಇರಲಿ, ಅದು ಕೀಳಾಗಬಹುದು; ಅದು ಕೀಳೆಂದು ತನ್ನ ಧರ್ಮವರ್ತನೆಯನ್ನು ಬಿಡಕೂಡದು. ಬ್ರಾಹ್ಮಣನು ಯಜ್ಞ ಯಾಗಗಳಿಗೆ ಪಶುಬಲಿಯನ್ನು ಮಾಡುತ್ತಿರುವನು. ಇದು ದಾರುಣವಾದ ಹಿಂಸಾಕ್ರಿಯೆ. ಮುಂದೆ ಆತನು ಪ್ರಾಣಿ ದಯೆಯನ್ನು ಬೋಧಿಸುತ್ತಿರುವನು" ಎಂದು ಆವುದೇ ಇರಲಿ ಅದನ್ನು ಹೇಸದೆ ಮಾಡುತ್ತಿದ್ದು ಸ್ವಧರ್ಮವನ್ನು ಸಾಧಿಸಬೇಕೆಂದು ಕಾಳಿದಾಸನು ಹೇಳಿರುವನು. ಈ ನುಡಿಗಳು ರಾಷ್ಟ್ರ ಜಾಗೃತಿ ವಚನಗಳಲ್ಲವೇ?

---

## ಸ್ತ್ರೀ ಪುರುಷರಲ್ಲಿ ಭೇದವನ್ನು ತೋರದ ಕಾಳಿದಾಸ

ಸ್ತ್ರೀಯರಿಗೆ ಪುರುಷರಂತೆಯೇ ಸಮಾಜದಲ್ಲಿ ಸಲ್ಲತಕ್ಕ ಸ್ಥಾನಮಾನಗಳನ್ನು ಕೊಟ್ಟು ಗೌರವಿಸುವುದು ಭಾರತದ ಕರ್ತವ್ಯವಿದೆ. ಈ ವಿಷಯವನ್ನು ಕವಿಗಳು ಬಲ್ಲರು. ಬಲ್ಲವರಿದ್ದರೂ ಅವರ ಚರಿತ್ರ ಚಿತ್ರಣವನ್ನು ಮಾಡುವಾಗ ಕವಿಗಳು ಒಂದೆಡೆಗೆ ತಮ್ಮ ಸಹಾನುಭೂತಿಯನ್ನು ಹೆಚ್ಚು ತೋರುವುದುಂಟು. ಶೃಂಗಾರ ವರ್ಣನೆಯನ್ನು ಮಾಡ ಹೊರಟಾಗ ಸ್ತ್ರೀ ಜಾತಿಯು ಕೊಲೆಯಾಗುವುದೇ ಇದೆ. ಇಂತಹ ಪರಿಸ್ಥಿತಿಯು ಹಲವು ಗ್ರಂಥಗಳಲ್ಲಿ ಕಂಡುಬರುವುದಾದರೂ ಕಾಳಿದಾಸನಿಗೆ ಈ ಆರೋಪದ ಹೊರೆಯನ್ನು ಕೊಡಲಾಗುವುದಿಲ್ಲ.

ಕಾಳಿದಾಸನು ಮೂರು ಕಾವ್ಯಗಳನ್ನೂ ಮೂರು ನಾಟಕಗಳನ್ನೂ ಬರೆದಿರುವನು. ಕುಮಾರ ಸಂಭವ, ಮೇಘದೂತ, ರಘುವಂಶ, ಇವು ಮೂರು ಕಾವ್ಯಗಳು. ಮೇಘದೂತ ಅಲ್ಪ ಕಾವ್ಯ. ಈ ಕಾವ್ಯಗಳ ಮತ್ತು ಕಾವ್ಯದ ಆದಿಯ ಪದ್ಯದ ನೆನಪು ಹುಟ್ಟುವಂತೆ **'ಅಸ್ತಿಕಶ್ಚಿತ್ ವಾಕ್'** (ಒಂದು ಮಾತಿದೆ) ಎಂದು ಸಂಸ್ಕೃತಜ್ಞರು ಹೇಳುತ್ತಿರುವರು. **'ಅಸ್ತಿ'** ಎಂಬುದರಿಂದ **"ಅಸ್ತ್ಯುತ್ತ ರಸ್ಯಾಂದಿಶಿ"** ಎಂದು ಆರಂಭವಾಗುವ ಕುಮಾರ ಸಂಭವದ ನೆನಪಾಗುವುದು. **'ಕಶ್ಚಿತ್'**ಎಂಬ ಪದದಿಂದ **"ಕಶ್ಚಿತ್ ಕಾಂತಾ ವಿರಹ"** ಎಂದು ಆರಂಭಿಸುವ ಮೇಘದೂತ ಸ್ಮರಣೆ ಹುಟ್ಟುವುದು. 'ವಾಕ್' ಈ ನುಡಿಯಿಂದ **"ವಾಗಾರ್ಥವಿವ"** ಎಂದು ಮೊದಲಾಗುವ ರಘುವಂಶ ಮಹಾ ಕಾವ್ಯದ ಸ್ಮೃತಿ ಹುಟ್ಟುವುದು. 'ಮಾಳವಿಕಾಗ್ನಿಮಿತ್ರ' 'ವಿಕ್ರಮೋರ್ವಶಿಯು' "ಅಭಿಜ್ಞಾನ ಶಾಕುಂತಲ" ಇವು ನಾಟಕಗಳು. ಈ ಗ್ರಂಥಗಳಲ್ಲಿ ಚಿತ್ರಿಸಿರುವ ಸ್ತ್ರೀ ಪಾತ್ರಗಳಲ್ಲಿ ಅಥವಾ ಪುರುಷ ಪಾತ್ರಗಳಲ್ಲಿ ಯಾವೆಡೆಯಿಂದಲೂ ಲಂಚುಗಳಿತನವನ್ನು ಗೊಂಡಂತೆ ಗ್ರಂಥವನ್ನು ಅಭ್ಯಸಿಸಿದರೆ ಕಾಣಲಾರೆವು.

ಮೇಘದೂತ ವಿಲಾಪ ಕಾವ್ಯಕ್ಕೆ ಸೇರಿದ್ದು. ಕಾಂತೆಯ ಅಗಲಿನ ಮೂಲಕ ದುಃಖಗೊಂಡು ಮೇಘವನ್ನು ಸಂದೇಶವಾಹಕನಾಗಿ ಮಾಡಿದ ಕಾವ್ಯ. ಕಾಳಿದಾಸನು ಹಾಡಿ ಈ ಕಾವ್ಯವನ್ನು ರೇಡಿಯೋ (ಆಕಾಶ ವಾಣಿ) ದಲ್ಲಿ ಹೇಳಿರಬೇಕು!! ಆದ್ದರಿಂದ ಈ ಹೆಸರು ಕೊಟ್ಟು ಬರೆದಿರಬೇಕು!! ತನ್ನ ಹೆಂಡತಿಗೆ ಹೇಳಿಕಳುಹುವಾಗಲೂ "**ಜನಕತನಯಾ ಸ್ನಾನ ಪುಣ್ಯೋದ**

ಕೇಷು" ಎಂಬ ಮಾತನ್ನು ಎತ್ತಿದ್ದಾನೆ. ಸೀತೆ ಮಿಂದು ಪರಿಶುದ್ಧವಾದ ಕೆರೆಯು ಬಳಿಯು ಹಾಸುಗಲ್ಲಿನದ್ದು ಮಾಡುವ ಸಂದೇಶವಿದು. ಸೀತೆಯನ್ನು ನೆನಪೆತ್ತಿದುದರಿಂದ ತನ್ನ ಹೆಂಡತಿಗೆ ಆ ಪತಿವ್ರತೆಯು ನೆನಪವಾಗಲಿ.... ಎಂಬಿತ್ಯಾದಿ ಧ್ವನಿಯನ್ನು ಹೊರಹೊಮ್ಮಿಸಿದ್ದಾನೆ.

'ರತಿ ವಿಲಾಪ' ಕುಮಾರ ಸಂಭವದಲ್ಲಿ ಕಾಣಬರುವ ವಸ್ತು. ಈ ವಿಲಾಪ ಕಾವ್ಯವಂತೂ ಸುಂದರ. 'ಅಜ ವಿಲಾಪ' ರಘುವಂಶದಲ್ಲಿರುವುದು. ವಿಲಾಪಗಳನ್ನು ಬರೆವಾಗಲೂ ಭೇದಗತಿಯನ್ನು ತೋರಲಿಲ್ಲ. ಸೀತೆಯ ವಿಲಾಪವಂತೂ ಹದಿನಾಲ್ಕನೆಯ ಸರ್ಗದಲ್ಲಿದೆ. ಸೀತೆಯನ್ನು ಚಿತ್ರಿಸುವಲ್ಲಿ ವಾಲ್ಮೀಕಿಯು ಆದರ್ಶಕ್ಕೆ ಕಳೆಯನ್ನೇ ಕೊಟ್ಟಿದ್ದಾನೆ.

ಕಲ್ಯಾಣ ಬುದ್ಧೇರಥವಾತವಾಯಂ ನ ಕಾಮಚಾರೋ ಮಯಿ ಶಂಕನೀಯಃ।
ಮಮೈವ ಜನ್ಮಾಂತರ ಪಾತಕಾನಾಂ ವಿಪಾಕ ವಿಸ್ಫೂರ್ಜಥುರಪ್ರಸಹ್ಯಃ ॥

(ರಘುವಂಶ)

"ಲೋಕಕಲ್ಯಾಣವನ್ನು ಸಾಧಿಸುವ ಬುದ್ಧಿಯುಳ್ಳ ನಿನ್ನ ವಿಷಯದಲ್ಲಿ ಈ ತ್ಯಾಗವು ಸ್ವೈರ ವರ್ತನೆಯೆಂದು ಶಂಕಿಸಲಾಗುವುದಿಲ್ಲ. ಇದು ಜನ್ಮಾಂತರ ಪಾತಕಗಳ ತಡೆಯಲಾರದ ಪರಿಣಾಮರೂಪದ ಸಿಡಿಲಿನ ರವ" ಎಂದು ಸೀತೆ ಲಕ್ಷ್ಮಣನಿಗೆ ಹೇಳುವಳು. ರಾಮನು ಲೋಕಕಲ್ಯಾಣ ಸಾಧನೆಯ ಬಗೆಯುವನು. ಈ ತ್ಯಾಗ ಮನ ಬಂದಂತೆ ಮಾಡಿದ್ದಲ್ಲ. ನನ್ನ ಪಾಪಗಳ ಪರಿಣಾಮರೂಪವಾದ ಸಿಡಿಲ ಹೊಡೆತ,—ಎಂಬ ಈ ಮಾತಿನಲ್ಲಿ ತುಂಬಾ ಧ್ವನಿ ಇದೆ. ಸಿಡಿಲು ಎಲ್ಲಿ ಬೀಳುವುದೆಂದಿಲ್ಲ. ಅಂತೆಯೇ ಈ ಸಿಡಿಲ ಹೊಡೆತ ನನಗುಂಟಾಗಿದೆ. ಲೋಕಕಲ್ಯಾಣ ಸಾಧನೆಯಲ್ಲಿ ಮಗ್ನನಾಗಿ ರಾಮನಿರುವನು. ಎಲ್ಲಾದರೂ ರಾಣಿ ಗಂಡನೆದುರು ನುಡಿಯುತ್ತಿದರೆ ಲೋಕದ ಎಲ್ಲಾ ಹೆಂಗುಸರೂ ತಮ್ಮ ಗಂಡುಸರನ್ನು ಲಕ್ಷಿಸರು. ಲೋಕಕಲ್ಯಾಣಕ್ಕೆ ಇದರಿಂದ ತಡೆಯಾಗುವುದು ಎಂಬೀ ಬಗೆಯ ಸೀತೆಯ ಮಾತು ಭಾರತದ ಸ್ತ್ರೀ ಸಮಾಜಕ್ಕೆ ಸರಿಯಾದ ಉತ್ತರವನ್ನು ಕೊಟ್ಟಿದೆ.

ವಿಲಾಪ ಕಾವ್ಯಗಳನ್ನು ಬರೆವಾಗ ಸ್ತ್ರೀ, ಪುರುಷರೀರ್ವರ ಸ್ವಭಾವ ಚಿತ್ರಣವನ್ನೂ ಕೊಟ್ಟಿರುತ್ತಾನೆ. ಇಂದುಮತಿ ಅಜನ ಹೆಂಡತಿ. ರಾಜಮಹಿಷಿ.

ರಾಜಮಹಿಷಿಯು ಹೂವಿನ ಪೆಟ್ಟಿನಿಂದ ಮಡಿದಳು. ಮಡಿದ ಅವಳನ್ನು ಕವಿಯು ಹೀಗೆ ಹೇಳುತ್ತಿರುವನು.

ಪ್ರತಿಯೋಜಯಿತವ್ಯವಲ್ಲಕೀ ಸಮವಸ್ಥಾಮಥ ಸತ್ವ ವಿಪ್ಲವಾತ್ ॥

ರಘುವಂಶ ೮ ಸರ್ಗ ೪೧ ಪದ್ಯ.

ಪ್ರಾಣ ಹೋದ ಇಂದುಮತಿ ಸರಿಗೆ ಮೊದಲಾದುವು ಕಡಿದ ವೀಣೆ ಯಂತಿದ್ದಳು ಎಂದು ಕವಿ ಸುಮಂಗಲೆಯ ಮರಣ ವಿಚಾರವಾಗಿ ಹೇಳಿರು ವನು. ಸರಿಗೆಯಿಂದ ಕೂಡಿ ರವಗೊಡುತ್ತಿರುವ ವೀಣೆಯನ್ನು ಎತ್ತಿ ಬಾರಿ ಸುವರು. ವೀಣೆಯಿಂದ ಅದರ ಸಾಮಗ್ರಿ ಹಾಳಾಗಿ ಹೋದರೆ ಅದನ್ನು ಎತ್ತುವಂತಿಲ್ಲ. ಬೇರೆ ಸಾಮಗ್ರಿಗಳ ಕೂಡಿಕೆಯಾಗಬೇಕು. ವೀಣೆಯ ಸ್ಥಾನ ಜೀವಿತ ಸುಮಂಗಲೆಯದು.

ಕಾಳಿದಾಸನು ಕೊಟ್ಟ ಸ್ತ್ರೀ ಪಾತ್ರಗಳೆಲ್ಲಾ ವಿದ್ಯಾವತಿಯರದು; ಸ್ತ್ರೀ ಶಿಕ್ಷಣವು ಆತನ ಕಾಲದಲ್ಲಿ ಸಂಪೂರ್ಣವಾಗಿ ಇದ್ದಿತೆಂದು ಇದರಿಂದ ಊಹಿ ಸಬೇಕಾಗುತ್ತದೆ. ಪಾರ್ವತಿ ಪರ್ವತ ರಾಜನ ಪುತ್ರಿ. ಆಕೆ ಬಾಲ್ಯದಲ್ಲ—

ಮಂದಾಕಿನೀ ಸೈಕತ ವೇದಿಕಾಭಿಃ ಸಾಕಂದುಕೈಃ ಕೃತ್ರಿಮ ಪುತ್ರಕೈಶ್ಚ ।
ರೇಮೇ ಮುಹುರ್ಮಧ್ಯಗತಾ ಸಖೀನಾಂ ಕ್ರೀಡಾರಸಂ ನಿರ್ವಿಶತೀವ ಬಾಲ್ಯೇ ॥
ತಾಂ ಹಂಸಮಾಲಾಃ ಶರದೀವ ಗಂಗಾಂ ಮಹೌಷಧಿಂ ನಕ್ತಮಿವಾತ್ಮಭಾಸಃ ।
ಸ್ಥಿರೋಪದೇಶಾಮುಪದೇಶಕಾಲೇ ಪ್ರಪೇದಿರೇ ಪ್ರಾಕ್ತನ ಜನ್ಮವಿದ್ಯಾಃ ॥

ಕುಮಾರಸಂಭವ ೧ ಸರ್ಗ ೨೯-೩೦ ಶ್ಲೋಕ.

ಎಂದು ಹೇಗೆ ಬಳೆದಳೆಂಬುದನ್ನು ಹೇಳುತ್ತಾನೆ. ಪಾರ್ವತಿಯು ಗಂಗಾನದಿಯ ಮಳಲು ದಿನ್ನೆಯಲ್ಲಿ ತನ್ನ ಆಟದ ರಸವನ್ನು ಭೋಗಗೊಳ್ಳು ವಳಂತೆ ಚೆಂಡು ಮತ್ತು ಗೊಂಬೆಗಳಿಂದ ಸಖಿಯರೊಡನೆ ಆಡಿದಳು ಎಂದೆ ನ್ನುವನು. ಅಲ್ಲದೆ ತಿಳಿವಿನ ಶಕ್ತಿಯುಳ್ಳ ಪಾರ್ವತಿಯನ್ನು ವಿದ್ಯೋಪದೇ ಶದ ಕಾಲದಲ್ಲಿ ಶರತ್ಕಾಲದಲ್ಲಿ ಗಂಗೆಯನ್ನು ಹಂಸೆಗಳು ಕೂಡುವಂತೆಯೂ ರಾತ್ರಿಯಲ್ಲಿ ಮಹೌಷಧಿಗಳನ್ನು ಸ್ವಪ್ರಕಾಶಗಳು ಸೇರುವಂತೆಯೂ ಮುಜ್ಜ ನ್ಮದ ವಿದ್ಯೆಗಳು ಬಂದು ಸೇರಿದುವು ಎಂದು ಕವಿ ಕಾಳಿದಾಸನು ಮುಕ್ತ ಕಂಠವಾಗಿ ಹೇಳಿರುತ್ತಾನೆ. ಇದರಿಂದ ಅಂದು ಸ್ತ್ರೀಯರಿಗೆ ಶಿಕ್ಷಣವಿದ್ದಿತು. ಅದರೊಂದಿಗೆ ಇಂದಾಡುವಂತಹ ವಿವಿಧ ಚೆಂಡಿನಾಟಗಳು ಇದ್ದುವು. ಬಾಲ್ಯದ ಗೊಂಬೆಯಾಟವೂ ಅಂದಿತ್ತು ಎಂಬುದನ್ನು ತಿಳಿಯುವುದಲ್ಲದೆ ಸ್ತ್ರೀ ಶಿಕ್ಷಣವನ್ನು ಆತನು ಮೆಚ್ಚಿದ್ದಾನೆಂದೂ ತಿಳಿಯಬೇಕಿದೆ. ಕಾಳಿದಾಸನು

"ಶರತ್ಕಾಲದಲ್ಲಿ ಹಂಸಗಳು ಗಂಗೆಯನ್ನು ಸೇರ್ವಂತೆ ಮತ್ತು ರಾತ್ರಿಯಲ್ಲಿ ಸ್ವಯಂ ಪ್ರಕಾಶವುಳ್ಳ ಮಹೌಷಧಿಗಳು ಹೊಳೆವಂತೆ" ಎಂದು ಎರಡು ಉಪಮೆಗಳನ್ನು ಕೊಟ್ಟಿದ್ದಾನೆ. ಕವಿಗೆ ತನ್ನ ಆಶಯವನ್ನು ಪುಷ್ಟೀಕರಿಸುವಲ್ಲಿ ಅಲಂಕಾರಗಳ ಅಗತ್ಯ ಬೀಳುತ್ತದೆ. ಪಾರ್ವತಿ ಕಲಿಯುವ ಹೊತ್ತು ನೀರು ಹಾಲುಗಳನ್ನು ಬೇರ್ಗೆಯ್ವ ಹಕ್ಕಿಯಂತೆ ಇದ್ದಳು. ಕಲಿಯುವ ಹೊತ್ತು ವಿದ್ಯಾರ್ಥಿಗೆ ಬೇಕಾದ, ಒಂದು ಗುಣ, ಜ್ಞಾನವನ್ನು ಕೂಡಿಡುವುದು, ಉಳಿದುವನ್ನು ಬಿಡುವುದು. ಇದಲ್ಲದೆ ಮಕ್ಕಳಲ್ಲಿ ಸ್ವಯಂ ಪ್ರತಿಭಾ ಶಕ್ತಿ, ವಿವೇಕ ಶಕ್ತಿ ಇವುಗಳಿಂದಲೇ ವಿದ್ಯಾಭ್ಯಾಸದ ಪರಿಪೂರ್ಣತೆ ಮತ್ತು ಸಾರ್ಥಕತೆ. ಪಾರ್ವತಿಯಲ್ಲಿ ಇವಿದ್ದುವು. ಕವಿ ಸಮಯದಂತೆ ಹಂಸಗಳು ಉಳಿದ ಸಮಯದಲ್ಲಿ ಮಾನಸಸರೋವರದಲ್ಲಿರುವವು. ಮನುಷ್ಯನ ಮನಸ್ಸಾದರೂ ಅಂತೆಯೇ ಶಿಕ್ಷಣ ಕಾಲವನ್ನುಳಿದ ಹೊತ್ತಿನಲ್ಲಿ ಮನಸ್ಸರೋವರದಲ್ಲಿ ವಿಹರಿಸುತ್ತಿರುವುದು. ಗಂಗೆಯ ತಡಿಗೆ ಬಂದಾಗ ಅದು ಪವಿತ್ರಗೊಳ್ಳುತ್ತದೆ. ವಿದ್ಯೆಯು ಗಂಗೆಗೆ ಸಮಾನ. ಮಾನವನ ಪವಿತ್ರತೆಗೆ ವಿದ್ಯೆಯೇ ಸಹಾಯಕ. ರಾತ್ರಿಯಲ್ಲಿ ಬೆಳಕನ್ನು ಕಾಣಿಸುವವು ಸ್ವಯಂ ಪ್ರಭೆಯುಳ್ಳ ಔಷಧಿಗಳು. ಅಜ್ಞಾನದಲ್ಲಿ ಮುಳುಗಿದಾಗ ವಿವೇಕವನ್ನು ಕೊಡಲೂ ಅಜ್ಞಾನದ ಕಡೆಗೆ ತಿಳಿವಿನ ಬೆಳಕನ್ನು ಚೆಲ್ಲಲೂ ಉಳ್ಳುದು ಶಿಕ್ಷಣ. ಇವುಗಳನ್ನೆಲಾ ಒಂದುವಡೆದ ಮೂರ್ತಿಯಂತೆ ಕಾಳಿದಾಸನು ಪಾರ್ವತಿಯನ್ನು ಮಾಡಿ ಬಿಟ್ಟಿರುವನು.

ಕೃತಾಭಿಷೇಕಂ ಹುತಜಾತವೇದಸಂ ತ್ವಗುತ್ತರಾಸಂಗವತೀ ಮಧೀತಿನೀಂ॥

ಕು–ಸಂ–ಪಂ. ಸ ೧೬ ಶ್ಲೋಕ.

ಈ ಪದ್ಯದಲ್ಲಿ ಪಾರ್ವತಿಯು ಅಗ್ನಿ ಹೋತ್ರವನ್ನು ಮಾಡುತ್ತಿದ್ದಳು, ವೇದ ಸ್ತುತಿ ಪಾಠಗಳನ್ನು ಮಾಡುತ್ತಿದ್ದಳು ಎಂದು ಹೇಳಿರುವನು. ಇದರಿಂದ ವೇದಕಾಲದಲ್ಲಿ ಸ್ತ್ರೀ ಶಿಕ್ಷಣವು ಲೋಪಗೊಳ್ಳದೆ ಅದೇ ನೆಲೆಯಲ್ಲಿದ್ದಿತೆಂದೂ ಆ ಕುರಿತು ಕಾಳಿದಾಸನು ಹೇಳಿರುವನೆಂದೂ ತಿಳಿಯಬೇಕಿದೆ. ಶಕುಂತಳೆಯು ದುಷ್ಯಂತನಿಗೂ ಪತ್ರವನ್ನು ಬರೆದಿದ್ದಾಳೆ. ಆಕೆ ಕುಲಪತಿಯಲ್ಲಿ ನುರಿತವಳು. ವಿಕ್ರಮೋರ್ವಶೀಯದಲ್ಲೂ ಊರ್ವಶಿ ಅಭಿಜ್ಞೆ. ಅನಸೂಯಾ ಪ್ರಿಯಂವದೆಯರು ಶಕುಂತಳೆಯ ಸಹಚರಿಯರು. ಅವರೂ ಶಿಕ್ಷಣವನ್ನು ಪಡೆದವರೇ.

ಇದಲ್ಲದೆ ಕಾಳಿದಾಸನು ಪುರುಷರಿಗಾಗಿ ಹೆಚ್ಚಿನ ಸ್ಥಾನವನ್ನು ಕೊಟ್ಟಿಲ್ಲ. ಅರುಂಧತಿಯು ಪಾರ್ವತಿಯ ವಿವಾಹ ಸಮಾರಂಭ ರಚನೆಗೆ ಬಂದಿದ್ದಳು. ಅಲ್ಲಿ ಈಶ್ವರನು ಮುನಿಗಳನ್ನೂ ಅವಳನ್ನೂ ಗೌರವಭೇಧ ವಿಲ್ಲದೆ ಗೌರವಿಸಿದನು. ಈ ಹೊತ್ತಿಗೆ ಕವಿ.

ಸ್ತ್ರೀ ಪುಮಾನಿತ್ಯನಾಸ್ಥೈಷಾ ವೃತ್ತಂ ಹಿ ಮಹಿತಂ ಸತಾಂ॥

ಕು. ಸಂ. ೬ ಸ. ೧೨ ಶ್ಲೋಕ.

ಸ್ತ್ರೀ ಪುರುಷರೆಂಬ ಭೇದವು ಮಹಾಪುರುಷರಿಗಿಲ್ಲ. ಚರಿತ್ರೆ (ನಡೆ) ಯೇ ಪೂಜ್ಯವಾಗಿದೆ ಎಂದು ಹೇಳಿರುವನು. ಕಾಳಿದಾಸನು ಇಲ್ಲಿ ಗುಣವೇ ಮುಖ್ಯ, ವಯಸ್ಸು ಲಿಂಗಭೇದ ವಿಚಾರವಿಲ್ಲ ಎಂಬುದನ್ನು ತಿಳಿಸಿರುವನು. ನಮ್ಮ ಜನಾಂಗ ಹೆಣ್ಣುಮಕ್ಕಳಿಗೂ ಗಂಡುಮಕ್ಕಳಿಗೂ ಭೇದಗತಿಯನ್ನು ತೋರುತ್ತಿದೆ. ಕಾಳಿದಾಸನು ಇದನ್ನು ಕಂಡಿಲ್ಲ. ಅವನು ಭೇದಭಾವ ವಿರದೆ ನಡತೆಯ ಕಡೆಗೆ ಲಕ್ಷಿಸುವಂತೆ ಮಾಡುವನು.

---

## ಸ್ತ್ರೀ ಸಮಾಜದ ಹಿತವನ್ನೊರೆವ ಕಾಳಿದಾಸ

ಕಾಳಿದಾಸನು ಶೃಂಗಾರ ರಸಕ್ಕೆ ತನ್ನ ಗ್ರಂಥಗಳಲ್ಲಿ ಪ್ರಾಮುಖ್ಯವನ್ನು ಕೊಟ್ಟಿರುವನಾದರೂ ಅವನ ಗ್ರಂಥಗಳಲ್ಲಿ ಸ್ತ್ರೀ ಸಮಾಜದ ಹಿತವನ್ನೇ ಅವುಗಳಿಂದ ಸಾಧಿಸಿರುವನು. ಪಾರ್ವತೀ ಪರಿಣಯದ ಕಥೆ ಕುಮಾರ ಸಂಭವದಲ್ಲಿರುತ್ತದೆ. ಧರ್ಮದಿಂದ ಸೋತ ಶಿವನು ಪಾರ್ವತಿಯನ್ನು ವರಿಸುವನು. ಪಾರ್ವತಿಯು ಶಿವನ ಪ್ರೇಯಸಿಯಾಗಲು ಆಕೆಯ ತಪೋಧರ್ಮ-ಏಕಭಾವವಾದ ನಿಷ್ಠೆ ಇವೇ ಕಾರಣ. ಸಮಾಧಿಯಿಂದಲೇ ತನಗೆ ಅನುರೂಪನಾದ ಪತಿಯನ್ನು ಆಕೆ ಸಾಧಿಸಿಯೇ ಬಿಟ್ಟಳು.

ವಿಕ್ರಮೋರ್ವಶೀಯದಲ್ಲಿ ಗುಣಕ್ಕೆ ಮೆಚ್ಚಿದ ವಿವಾಹವು ಉಂಟಾಗುತ್ತದೆ. ಶಾಕುಂತಳದಲ್ಲಿ ಗಾಂಧರ್ವ ವಿವಾಹ ನಡೆಯಿತು. ಗಾಂಧರ್ವ ವಿವಾಹದ ಪರಿಣಾಮವೂ ಕಂಡುಬಂದಿತು. ಶಾಂರ್ಙ್ಗರವನು ಮತ್ತು ಗೌತಮಿ ಇವರೀರ್ವರೂ ಗಾಂಧರ್ವ ವಿವಾಹದ ಕುರಿತು ಆಕ್ಷೇಪಿಸಿಯೇ ಬಿಟ್ಟಿರುವರು. ಕಾಳಿದಾಸನು ಇಂತಹ ವಿವಾಹವನ್ನು ಒಪ್ಪಿದವನಲ್ಲ. ಸಮಾಜದ ಪುರೋಗತಿಗೆ ಗಾಂಧರ್ವ ವಿವಾಹ ಶ್ರೇಯಸ್ಕರವಲ್ಲ. ಹತ್ತು ಜನರು ಅರಿತು ಉಂಟಾಗುವ ವಿವಾಹದ ಸುಖವು ಗಾಂಧರ್ವ ವಿವಾಹದಿಂದ ನಾರೀಸಮಾಜಕ್ಕೆ ಉಂಟಾಗುವುದಿಲ್ಲ.

> ನಾಪೇಕ್ಷಿತೋ ಗುರುಜನೋ ನ ಖಲು ಪೃಷ್ಟಶ್ಚ ಬಂಧು ಜನಃ ।
> ಪರಸ್ಪರಸ್ಮಿನ್ನೇವ ಚರಿತೇ ಭಣಾಮಿ ಕಿಮೇಕ್ಕೈಕಂ ॥

ಗುರು ಜನರನ್ನು ಕೇಳಿ ಮದುವೆಯಾಗಬೇಕು. ಬಂಧು ಜನರೊಡನೆ ಈ ವಿಚಾರವಾಗಿ ಕೇಳಬೇಕು. ಇದರ ವಿನಾ ಶಕುಂತಳಾ ದುಷ್ಯಂತರ ವಿವಾಹವು ಉಂಟಾಯಿತು. ಈ ವಿಷಯದಲ್ಲಿ ನಾನೇನೆನ್ನಲಿ ಎಂದು ಗೌತಮಿ ದುಷ್ಯಂತ ಶಕುಂತಳೆಯರ ಮುಂದೆ ನುಡಿದಳು. ರಾಜನು ಈ ತೆರದ ವಿವಾಹವನ್ನು ಮಾಡಿದ್ದರಿಂದ ಗೌತಮಿಗೆ ಹೆಚ್ಚು ಮಾತನ್ನೆತ್ತಲೂ ಅವಕಾಶವಿಲ್ಲದಾಯಿತು.

> ಅತಃ ಪರೀಕ್ಷ್ಯ ಕರ್ತವ್ಯಂ ವಿಶೇಷತ್ಸಂಗತಂ ರಹಃ ।
> ಅಜ್ಞಾತ ಹೃದಯೇಷ್ವೇವಂ ವೈರೀ ಭವತಿ ಸೌಹೃದಂ ॥

ದುಷ್ಯಂತನು ಶಕುಂತಳೆಯು ಪರಿಣೀತಳಾದ ಪತ್ನಿಯಲ್ಲವೆಂದು ಹೇಳತೊಡಗಿದಾಗ ಕಣ್ವ ಶಿಷ್ಯನು ಹೇಳುವ ಮಾತಿದು. "ವಿಶೇಷವಾದ ದಾಂಪತ್ಯ ಬಂಧವನ್ನು ಸಾಧಿಸುವಾಗ ಪರೀಕ್ಷೆಯನ್ನು ಮಾಡಿಯೇ ಆ ಕೆಲಸಕ್ಕೆ ಇಳಿಯಬೇಕು. ಪರೀಕ್ಷಿಸದೆ, ಹೃದಯವನ್ನರಿಯದೆ ಮಾಡಿದ ಗೆಳೆತನದ ದಾಂಪತ್ಯ ಸಂಪರ್ಕ

ಈ ರೀತಿಯಲ್ಲಿ ವಿರೋಧಕ್ಕೆ ಎಡೆಯನ್ನು ಕೊಡುತ್ತದೆ" ಎಂದು ನಾರೀ ಸಮಾಜಕ್ಕೆ ಉಪದೇಶ ರೂಪದಲ್ಲಿ ಹೇಳುತ್ತಿರುವನು.

ದುಷ್ಯಂತನು ಶಕುಂತಳೆಯನ್ನು ಬಿಟ್ಟನು. ಆಕೆಯು ನಿರ್ಗತಿಕಳಾದಳು. ಗುರು ಶಿಷ್ಯರ ಹಿಂದೆ ಆಕೆ ಬರಲು ಯತ್ನಿಸುವಳು. ಆ ಹೊತ್ತಿನಲ್ಲಿಯೂ ನಾರೀ ಸಮಾಜಕ್ಕೆ ಹಿತವಾದ ನುಡಿಯನ್ನೇ ಗುರು ಶಿಷ್ಯರು ಹೇಳುವರು.

ಸತೀಮಪಿ ಜ್ಞಾತಿಕುಲೈಕ ಸಂಶ್ರಯಾಂ ಜನೋಽನ್ಯಥಾ ಭರ್ತೃಮತೀಂ ವಿಶಂಕತೇ ॥
ಅತಃ ಸಮೀಪೇ ಪರಿಣೇತುರಿಷ್ಯತೇ ಪ್ರಿಯಾಪ್ರಿಯಾವಾ ಪ್ರಮದಾ ಸ್ವಬಂಧುಭಿಃ ॥

ಲೋಕದ ಜನರು ಗಂಡನಿದ್ದು ತಂದೆಯ ಮನೆಯಲ್ಲಿರುವ ಪತಿವ್ರತೆಯಾದ ಹೆಂಗಸನ್ನು ತಪ್ಪೆಣಿಕೆಯಿಂದ ಕೂಡಿ ಬೇರಾಗಿಯೇ ಸಂಶಯಗೊಳ್ಳುವರು. ಆದುದರಿಂದ ಒಳ್ಳೆಯವನಿರಲಿ ಕೆಟ್ಟವನಿರಲಿ ಕನ್ನಿಕೆಯರ ಬಂಧುಗಳು ಪತಿ ಗೃಹದಲ್ಲೇ ತಮ್ಮ ಪುತ್ರಿಯರನ್ನು ಬಾಳಲು ಇಚ್ಛೆಗೊಳ್ಳುತ್ತಾರೆ. ಈ ಮಾತು ಶಾಙ್ಗರ್ರವನ ಮೂಲಕ ಬಂದಿದೆಯಾದರೂ ಕಾಳಿದಾಸನು ನಾರೀ ಸಮಾಜಕ್ಕೆ ಕೊಡುವ ಸಂದೇಶವಿದು.

ಜೀವನದಲ್ಲಿ ಹೆಂಗಸರಿಗೆ ವಿಶಿಷ್ಟವಾದ ಸ್ಥಾನವಿದೆ. ಅವರ ನೆಲೆ ಲೋಕದ ಧಾರಣೆಗೆ [ಸ್ಥಿತಿಗೆ] ಬೇಕಾದ ಧರ್ಮಕ್ಕೆ ಕಾರಣ. ಸ್ತ್ರೀಯರು ಗಂಡುಸಿಗಿಂತ ಸಮಾಜದಲ್ಲಿ ಅಧಿಕ ಸ್ಥಾನ ಮಾನದಿಂದ ಕೂಡಿರುತ್ತಾರೆ. ಲೋಕದ ಎಲ್ಲಾ ಧರ್ಮ ಕ್ರಿಯೆಗಳಿಗೆ ಸತ್ಪತ್ನಿಯರೇ ಮೂಲಕಾರಣರಾಗುತ್ತಾರೆ. ಇದನ್ನು ಕಾಳಿದಾಸನು ಬಲ್ಲವನಿದ್ದಾನೆ. ಕುಮಾರ ಸಂಭವದಲ್ಲಿ ಅರುಂಧತಿಯು ಕುರಿತು ಹೇಳುವಾಗ

ಕ್ರಿಯಾಣಾಂ ಖಲು ಧರ್ಮ್ಯಾಣಾಂ ಸತ್ಪತ್ನ್ಯೋ ಮೂಲಕಾರಣಂ ॥

ಈ ರೀತಿಯಿಂದ ಹೇಳುತ್ತಿರುವನು. ಸಾಧ್ವಿಯರಾದ ಹೆಂಗಸರೇ ಧರ್ಮ ಸಂಬಂಧ ಕ್ರಿಯೆಗಳಿಗೆ ಮೂಲಕಾರಣರಾಗುತ್ತಿರುವರು ಎಂದು ಕಾಳಿದಾಸನು ಮುಕ್ತ ಕಂಠವಾಗಿ ಉದ್ಘೋಷಿಸಿದುದು ನಾರೀ ಸಮಾಜದ ಮಹತ್ವವನ್ನು ಕಂಡು.

ಹೆತ್ತವರು ಎಂತಹ ಪತಿಗೆ ತಮ್ಮ ಹೆಣ್ಣು ಮಕ್ಕಳನ್ನು ಕೊಟ್ಟರೆ ಚಿಂತೆಯಿಲ್ಲವೆ ಸುಖಿಗಳಾಗಬಹುದು ಎಂಬುದನ್ನು ಕುಮಾರಸಂಭವದ ಆರನೆ ಸರ್ಗದಲ್ಲಿ ಹೇಳಿರುವನು.

ಅಶೋಚ್ಯಾಹಿ ಪಿತುಃ ಕನ್ಯಾ ಸದ್ಭರ್ತೃ ಪ್ರತಿಪಾದಿತಾ ॥

ಉತ್ತಮನಾದ[ಸದ್ಭರ್ತೃ] ಪತಿಯನ್ನು ಹೊಂದಿದ ಕನ್ನಿಕೆ, ತಂದೆಗೆ ಆಕೆಯ

ಕುರಿತು ಯಾವ ವಿಚಾರವೂ ಇಲ್ಲದಿರಲು ಆಸ್ಪದಕೊಡುತ್ತದೆ ಎನ್ನುತ್ತಿರುವನು. ತಾಯಿ ತಂದೆಗಳು ಬಂಧು ಜನರು ಹೆಣ್ಣನ್ನು ಕೊಡುವ ಕಾಲದಲ್ಲಿ ಯಾವುದನ್ನು ವಿಚಾರಿಸುವರು ಎಂಬುದನ್ನು ನಾವು ತಿಳಿದಿರಬೇಕು. ಹುಡುಗಿ ಪ್ರಾಯಕ್ಕೆ ಬಂದೊಡನೆ ಗಂಡನನ್ನು ಹುಡುಕುವ ಕೆಲಸ ಹೆತ್ತವರಿಗೆ ಉಂಟಾಗುತ್ತದೆ. ಆ ಸಮಯದಲ್ಲಿ ಕನ್ನಿಕೆಯು ಏನನ್ನು ಬಯಸುವಳು, ತಾಯಿ ಯಾವುದನ್ನು ಇಚ್ಛಿಸುತ್ತಾಳೆ, ತಂದೆ ಯಾವುದರ ಕಡೆಗೆ ಗಮನ ಕೊಡುತ್ತಾನೆ; ಬಂಧುಗಳು ಆವುದನ್ನು ಬಯಕೆಗೊಳ್ಳುತ್ತಾರೆ, ಬೇರೆಯವರು ಯಾವುದನ್ನು ಆಶಿಸುತ್ತಾರೆ ಎಂಬುದನ್ನು ಈ ಕೆಳಗಣ ಪದ್ಯವು ಸ್ಪಷ್ಟವಾಗಿ ಹೇಳುತ್ತಿರುವುದು.

> ಕನ್ಯಾ ವರಯತೇ ರೂಪಂ ಮಾತಾ ವಿತ್ತಂ ಪಿತಾ ಶ್ರುತಂ।
> ಬಾಂಧವಾಃ ಕುಲಮಿಚ್ಛಂತಿ ಮೃಷ್ಟಾನ್ನಮಿತರೇ ಜನಾಃ॥

ಕನ್ಯೆ ರೂಪವನ್ನು ವರಿಸುವಳು. ಕನ್ನೆಯ ತಾಯಿ ಸಂಪತ್ತನ್ನು ಬಯಸುವಳು. ಮಗಳ ಸುಖಕ್ಕೆ ಸಂಪತ್ತೇ ಮುಖ್ಯವೆಂದು ಆಕೆಯ ಬಗೆ. ತಂದೆ ಹುಡುಗನು ಯಶೋವಂತನೋ ಎಂದು ನೋಡುವನು. ಹುಡುಗನ ಪ್ರಸಿದ್ಧಿ ಆತನ ಚರ್ಯೆಯನ್ನು ಅವಲಂಬಿಸಿದೆ. ವಿದ್ಯಾ ವಿನಯ ಸಂಪತ್ತು ಚರ್ಯೆಯ ನೆಲೆಗೆ ಕಾರಣವಾಗುತ್ತದೆ. ಕಲಿತು ಒಳ್ಳೆಯ ನಡತೆಯಿಂದ ಕೂಡಿದ ಹೆಸರನ್ನು ಹೊಂದುವ ಹುಡುಗನಾದರೆ ತಂದೆಗೆ ಸಾಕು. ನೆಂಟರಿಗೆ ಮೃಷ್ಟಾನ್ನದ ಪ್ರಾಪ್ತಿಯಿಂದ ತೃಪ್ತಿ. ವಿವಾಹ ಸಂಪರ್ಕವನ್ನು ಸಾಧಿಸುವಲ್ಲಿ ಕನ್ನೆಯ ನೋಟ ಚೆಲುವಲ್ಲಿ. ತಾಯಿಯ ದೃಷ್ಟಿ ಸಂಪತ್ತಲ್ಲಿ. ತಂದೆಯ ಕಣ್ಣು ಪ್ರಸಿದ್ಧಿಯನ್ನು ಹೊಂದುವ ಶಿಕ್ಷಣ ಸಾಮಾಗ್ರಿಯಲ್ಲಿ. ಬಂಧುಗಳ ಅವಲೋಕನೆ ಕುಲದ ಕಡೆಗೆ. ಉಳಿದವರ ನೋಟ ಮೃಷ್ಟಾನ್ನ ಭೋಜನಪ್ರಾಪ್ತಿಯ ಕಡೆಗೆ. ಇವು ಅಕ್ಷರಶಃ ಸತ್ಯವಾದವು.

ಕನ್ಯಾದಾನ "ಸುಶಿಷ್ಯನಿಗೆ ಕೊಟ್ಟ ವಿದ್ಯೆಯಂತಾಗಬೇಕು" ಎಂದು ಕಾಳಿದಾಸನು ಹೇಳುವನು. ಈ ಅಭಿಪ್ರಾಯವು ಕಾಶ್ಯಪನು ಶಕುಂತಳೆಯ ವಿಷಯದಲ್ಲಿ ಹೇಳಿದ ನುಡಿ. ಶಕುಂತಳೆ ದುಷ್ಯಂತನನ್ನು ವರಿಸಿರುವಳೆಂದು ಕಾಶ್ಯಪನು ತಿಳಿದನು. ತಿಳಿದ ಬಳಿಕ ಮಗಳನ್ನು ತಬ್ಬಿಕೊಂಡು ಈ ರೀತಿಯಿಂದ ತಾತ ಕಾಶ್ಯಪನು ಆಕೆಯನ್ನು ಅಭಿನಂದಿಸಿದನು, ಎಂದು ಪ್ರಿಯಂವದೆ ಹೇಳುವ ಮಾತು ಕನ್ಯಾದಾನ ವಿಷಯದಲ್ಲಿ ಒಪ್ಪತಕ್ಕ ಮಾತು. **"ವತ್ಸೇ ಸುಶಿಷ್ಯ ಪರಿದತ್ತಾ ವಿದ್ಯೇವಾ ಶೋಚನೀಯಾ ಸಂವೃತ್ತಾ"** "ಮಗಳೇ!

ಉತ್ತಮ ಶಿಷ್ಯನಿಗೆ ಕೊಟ್ಟ ಶಿಕ್ಷಣದಂತೆ ಅಶೋಚನೀಯಳಾದೆ" ಎಂದೊರೆವ ಕುಲಪತಿಯ ನುಡಿ ಅತಿ ಅನರ್ಘವಾದುದು.

ಉತ್ತಮನಾದ ಶಿಷ್ಯನಿಗೆ ಕೊಟ್ಟ ವಿದ್ಯೆಯ ಫಲ ಜನಸಮುದಾಯಕ್ಕೆ. ಜನತೆ ವಿದ್ಯಾವಂತನಿಂದ ರಾಷ್ಟ್ರಕ್ಕೆ ಬೇಕಾದ ಸಂಪತ್ತನ್ನು ಪಡೆಯುವುದು. ಕನ್ನೆ ಉತ್ತಮನಾದ ವರನಿಗೆ ದಾನಗೊಂಡರೆ ಗೃಹಸ್ಥ ಧರ್ಮವು ಉಂಟಾಗಿ ಇತರ ಬ್ರಹ್ಮಚರ್ಯ, ಭಿಕ್ಷು, ವಾನಪ್ರಸ್ಥಾಶ್ರಮಗಳಿಗೆ ಸಹಾಯಕವೆನಿಸುವುದು. ಗೃಹಸ್ಥಧರ್ಮವು ಇತರ ಆಶ್ರಮಗಳನ್ನು ಪೋಷಿಸುತ್ತಿದ್ದು ಅವುಗಳಿಗಿಂತ ಮೇಲೆನಿಸಿದೆ. ಗೃಹಸ್ಥಧರ್ಮವು ಈ ಕರ್ತವ್ಯಕ್ಕಾಗಿದೆ. ವಿದ್ಯಾಪ್ರದಾನವು ಲೋಕಹಿತಕ್ಕೆ. ಅಂತೆಯೇ ಗೃಹಸ್ಥಧರ್ಮ ಅನ್ಯರ ಪೋಷಣೆಗೆ. ವಿದ್ಯೆಯನ್ನು ಪಡೆಯಲು ಗುರುಕುಲಕ್ಕೆ ಸೇರುವ ಮಂದಿ ಬಹಳ. ಅದರ ಸದುಪಯೋಗವಾಗುವುದು ಕಡಮೆ. ಇಂತೆಯೇ ಕನ್ಯಾದಾನದಿಂದ ಸದುಪಯೋಗವನ್ನು ಹೊಂದುವುದು ತೀರಾ ವಿರಳ.

ವಿವಾಹಾನಂತರ ಕನ್ನೆಯರು ಪತಿಯೊಂದಿಗೆ ಬಾಳುತ್ತಿದ್ದು ಹಿರಿಯರ ಸೇವೆ, ಸೇವಕರಲ್ಲಿ ದಾಕ್ಷಿಣ್ಯ ಬುದ್ಧಿಯಲ್ಲಿದ್ದು ವೈಮನಸ್ಯ ತೋರದಿರುವಿಕೆ; ಇನ್ನಿತರರಲ್ಲಿ ಗೆಳೆತನದ ವರ್ತನೆಗಳಿದ್ದು ಕುಲಹಿತವನ್ನು ಸಾಧಿಸುವುದು ನಾರೀ ಸಮಾಜದ ಕರ್ತವ್ಯ. ಜೀವನದಲ್ಲಿ ಕ್ಷೋಭೆಯುಂಟಾಗದಿರುವುದು ಈ ತೆರೆದ ವರ್ತನೆಯಿಂದ.

ಕಾಳಿದಾಸನು **"ಅನುರೂಪ ವರಪ್ರದಾನ"**ವೇ ಪ್ರಥಮ ಸಂಕಲ್ಪವೆಂದು ಹೇಳುತ್ತಿರುವನು. ಆತ್ಮ ಸದೃಶನಾದ ಪತಿಯನ್ನು ಪಡೆಯುವುದು ಸುಕೃತಫಲವೆಂದೂ ಆತನ ಅಭಿಪ್ರಾಯವಿದೆ. ಇದರಿಂದಲೇ "ಭರ್ತಾರಮಾತ್ಮಸದೃಶಂ ಸುಕೃತೈರ್ಗತಾಸ್ತ್ವಂ" ಎಂದು ಕಣ್ವನು ಶಕುಂತಲೆಗೆ ಹೇಳುತ್ತಿರುವನು. ಸ್ತ್ರೀ ಸಮುದಾಯವು ಗೃಹಸ್ಥಧರ್ಮವನ್ನು ಪಡೆದ ಮೇಲೆ ಮಾಡತಕ್ಕ ಕರ್ಮ ಬಹಳ. ವಿದ್ಯಾಭ್ಯಾಸಾನಂತರ ಗುರುಕುಲದಿಂದ ನಿವೃತ್ತನಾದ ಶಿಷ್ಯನು ವಿವೇಕವನ್ನು ತಾಳಿ ನಡೆಯಬೇಕು. ವಿದ್ಯೆಯ ಉಪಯೋಗ ಹೊಸ ವಿಷಯಗಳನ್ನು ಸಂಗ್ರಹಿಸುವುದಕ್ಕೆ; ಲೋಕ ಬೋಧೆಗೆ; ತಿಳಿವಿನ ಬಳಸುವಿಕೆಗೆ; ತಿಳಿವಿನ ಕರ್ಮ ಪ್ರಸಾರಣೆಗೆ; ಈ ನಾಲ್ಕು ಕೆಲಸಗಳು ವಿದ್ಯಾಭ್ಯಾಸದಿಂದಾಗಬೇಕು. ವಿವಾಹದ ನಂತರ ಪತಿಗೆ ಸ್ತ್ರೀಯು ಜ್ಞಾನ ಸಂಗ್ರಹದಲ್ಲಿ, ಅದನ್ನು ಬೋಧಿಸುವುದರಲ್ಲಿ, ಬಳಸುವಿಕೆಯಲ್ಲಿ ನೆರವಾಗುತ್ತಿರಬೇಕು. ಇಂದು ಮದುವೆಯಾದೊಡನೆ ಮನೆ ಬೇರಾಗುವುದು. ಗೃಹಸ್ಥಧರ್ಮವ

ತಪ್ಪುತ್ತಿರುವುದು. ಉತ್ತಮನಲ್ಲದ ಶಿಷ್ಯನಿಗೆ ಕೊಟ್ಟ ವಿದ್ಯೆಯಂತಾಗುವುದು. ವಿದ್ಯೆಯನ್ನು ಪಡೆದು ಅಸಂಸ್ಕೃತರಂತೆ ವರ್ತಿಸುತ್ತಿರುವೆವು. ವಿವಾಹವಾದ ಬಳಿಕ ಗೃಹಸ್ಥಧರ್ಮವನ್ನು ನಡೆಸುತ್ತಿಲ್ಲ. ಸ್ತ್ರೀ ಸಮಾಜ ವಿದ್ಯೆಯನ್ನು ಹೋಲುತಿದ್ದು "ವಿದ್ಯಾ ಕಾಮದುಘಾ" ಎಂಬ ನುಡಿಯು ಅನ್ವರ್ಥವಾಗು ವಂತೆ ಇರಬೇಕು. ಕಾಮಧೇನುವಿನ ನೆಲೆ ವಿದ್ಯೆಗೆ. ಸ್ತ್ರೀಯರು ಲೋಕ ದಲ್ಲಿ ಕಾಮಧೇನುವಿನ ಬಾಳುವೆಗೆ ತುಲ್ಯರಾಗಿದ್ದು **"ನ ಕೇವಲಾ ಮಾಂ ಪಯಸಾಂ ಪ್ರಸೂತಿಮವೇಹಿ ಮಾಂ ಕಾಮದುಘಾಂ ಪ್ರಸನ್ನಾಂ"** ಎಂಬ ನಂದಿನಿಯು ಮಾತಿನ ಕರ್ತೃಗಳಾಗಬೇಕು. ಈ ಮಾತನ್ನು ದಿಲೀಪ ನೊಡನೆ ನಂದಿನಿಯು ಹೇಳುತ್ತಿರುವಳು. "ನನ್ನನ್ನು ಕೇವಲ ಹಾಲ್ಗರೆವವಳೆಂದು ತಿಳಿಯಬೇಡ. ಪ್ರಸನ್ನೆಯಾದ ನಾನು ಇಷ್ಟಾರ್ಥಸಿದ್ಧಿಯನ್ನು ಕೊಡತಕ್ಕವಳು ಎಂದು ತಿಳಿ" ಎಂದು ದಿಲೀಪನಿಗೆ ಎಚ್ಚರಿಸುವ ನುಡಿಯಾಗಿದ್ದರೂ ಸ್ತ್ರೀ ಸಮಾಜವು ರಾಷ್ಟ್ರದ ಇಷ್ಟಾರ್ಥ ಸಂಪತ್ತಿಗುಳ್ಳವರೆಂದು ತಿಳಿಯ ಬೇಕಿದೆ. ಕಾಮಧೇನು ತುಲ್ಯರು ಸ್ತ್ರೀಯರು.



## ನಗರ ಸುಖವನ್ನೊರೆವ ಕಾಳಿದಾಸ

ಕಾಳಿದಾಸನ ಗ್ರಂಥಗಳಲ್ಲಿ ನಗರದ ಕುರಿತು ಅಲ್ಲಲ್ಲಿ ಮಾತುಗಳು ಬಂದಿವೆ. ಆದರೆ ಅಭಿಜ್ಞಾನ ಶಾಕುಂತಳಾ ನಾಟಕದಲ್ಲಿ ನಗರ ಸುಖದ ಕುರಿತು ಹೇಳಿದಂತೆ ಇನ್ನೆಲ್ಲೂ ಕಾಣಲಾರೆವು. ಕಣ್ವ ಮುನಿಯ ಶಿಷ್ಯರು ಕಣ್ವ ಸಂದೇಶವನ್ನು ವಹಿಸಿ ದುಷ್ಯಂತನ ರಾಜಧಾನಿಗೆ ಶುಕುಂತಳೆಯೊಂದಿಗೆ ತೆರಳಿದರು. ದುಷ್ಯಂತನ ರಾಜಧಾನಿಯಾದ ಹಸ್ತಿನಾವತಿಗೆ ಮುಟ್ಟಿದರು. ಕಣ್ವ ಶಿಷ್ಯರು ಈ ಮೊದಲು ನಗರಕ್ಕೆ ಹೋದವರಲ್ಲ. ಅಲ್ಲಿನ ವಾತಾವರಣದ ಅನುಭವವನ್ನು ಪಡೆದವರಲ್ಲ.

ದುಷ್ಯಂತನು ಕಣ್ವ ಶಿಷ್ಯರ ಆಗಮನವನ್ನು ನಿರೀಕ್ಷಿಸುತ್ತಿದ್ದನು. ಕಂಚುಕಿಯು ಮುನಿ ವಟುಗಳನ್ನು ರಾಜನು ನಿರೀಕ್ಷಿಸುತ್ತಿದ್ದ ಅಗ್ನಿಶಾಲೆಗೆ ಕರೆದೊಯ್ದನು. ಶಾಂರ್ಙ್ಗರವನು ಅಲ್ಲಿಗೆ ಸೇರಿದ ಕೂಡಲೇ ಶಾರದ್ವತನನ್ನು ಕರೆದು ನಗರ ಸ್ಥಿತಿಯನ್ನು ಹೇಳತೊಡಗಿದನು.

"ಮಹೀಭಾಗಃ ಕಾಮಂ ನರಪತಿರ ಭಿನ್ನಸ್ಥಿತಿರಹೋ
ನಕಶ್ಚಿದ್ವರ್ಣಾನಾಮುಪಥಮಪ-ಕೃಷ್ಟೋಽಪಿ ಭಜತೇ
ತಥಾಪೀದಂ ಶಶ್ವತ್ಪರಿಚಿತವಿವಿಕ್ತೇನ ಮನಸಾ
ಜನಾಕೀರ್ಣಂಮನ್ಯೇಹುತವಹ ಪರೀತಂಗೃಹಮಿವ ॥"

ಎಂದು. 'ಎಲೆ ಶಾರದ್ವತ, ಏನೆನ್ನಲಿ'! ರಾಜನು ಲೋಕಮರ್ಯಾದೆಯನ್ನು ತಪ್ಪದೆ ನಿಂತಿರುವನು. ಇದರಿಂದ ಈತನು ಪೂಜನೀಯನಾಗಿದ್ದಾನೆ. ಇಲ್ಲಿ ವರ್ಣದಿಂದ ಕೀಳಾದವನೂ ತಪ್ಪು ದಾರಿಯನ್ನು ಹಿಡಿಯುತ್ತಿಲ್ಲ. ಈ ಬಗೆಯು ನೆಲೆ ಈ ರಾಜಸ್ಥಾನದಲ್ಲಿರುವುದಾದರೂ ದಿನೇ ದಿನೇ ವಿಜನಸ್ಥಾನದಲ್ಲಿದ್ದು ಶಾಂತಿಗೊಂಡ ಮನಸ್ಸಿಗೆ ಬೆಂಕಿ ಹಿಡಿದ ಮನೆಯು ಸುಖಾನುಭವವಾಗುತ್ತಿದೆಯೆಂದನು.

ದುಷ್ಯಂತನ ನ್ಯಾಯಶಾಸನೆ ಸರಿಯಾಗಿ ಹಸ್ತಿನಾವತಿಯಲ್ಲಿ ನಡೆಯುತ್ತಿತ್ತು. ಒಬ್ಬನೂ ತಪ್ಪು ಕೆಲಸಗಳನ್ನು ಮಾಡುತಿದ್ದಿಲ್ಲ. ನ್ಯಾಯ ಧರ್ಮದಿಂದಲೇ ನಡೆಯುತಿದ್ದರು. ಹೀಗಿದ್ದರೂ ನಗರದ ಕೋಲಾಹಲ ವಿಶೇಷ. ಮನೆಗೆ ಬೆಂಕಿ ಹಿಡಿದರೆ ಕೇಳುವ ಗುಲ್ಲು ಅಲ್ಪವಲ್ಲ. ಅಂತೆಯೇ ಅಲ್ಲಿ ಜನ ಘೋಷ ತುಂಬಿದ್ದಿತು. ಜನ ತುಂಬಿದ ನಗರದಲ್ಲಿ ಸೆಕೆಹೆಚ್ಚು. ಜನ ಸಂಮರ್ದದಿಂದ ಅಲ್ಲಿನ ಹವೆ ಬಿಸಿಗೊಂಡಿತ್ತು. ಇದರಿಂದ ಮುನಿ ಶಿಷ್ಯನಿಗೆ ಬೆಂಕಿ ಹಿಡಿದ ಮನೆಯಲ್ಲಿ ನಿಂತಂತಾಗುತ್ತಿತ್ತು. ಹಳ್ಳಿಯ ಶಾಂತವಾದ ವಾತಾವರಣ

ಅಲ್ಲಿದ್ದಿಲ್ಲ. ಗಾಳಿಯ ಸುಖ ಸ್ಪರ್ಶ ಆತನಿಗೆ ಅಲ್ಲಿ ಉಂಟಾಗಲಿಲ್ಲ. ಮೈ ಉರಿಯೇರಿತ್ತು. ಸೆಕೆ ತುಂಬಿತ್ತು. ಈ ಅನುಭವ ನಗರಕ್ಕೆ ಬಂದ ಹಳ್ಳಿಗನಿಗೆ ಉಂಟಾಗುವುದು ವಿಚಿತ್ರವಲ್ಲ. ಶಾಂರ್ಙ್ಗರವನು ಹಸ್ತಿನಾವತಿಯ ರಾಜಸ್ಥಾನವನ್ನು ಸಂದರ್ಶಿಸಿದಾಗ ಈ ನೆಲೆ ಆತನಿಗೆ ಉಂಟಾಯಿತು. ಸಾಮಾನ್ಯ ತರಹದ ನಗರವನ್ನು ಹೊಕ್ಕರೆ ಮತ್ತೆ ಕೇಳಬೇಕೆ? ಕೊಳೆಯ ಚರಂಡಿ, ಧೂಳಿಡಿದ ರಸ್ತೆ, ಓಡುವ ವಾಹನಗಳು, ತುಂಬಿದ ನಗರಸುಖವನ್ನು ಮತ್ತೆ ಹೇಳಬೇಕೇ? ಕಾಲು ಗಂಟೆಯಲ್ಲಿ ವಸ್ತ್ರದ, ಮೈಯ, ಮುಖದ, ಕೂದಲ, ಬಣ್ಣ ಬದಲುತ್ತಿರುವುದು. ಒಂದು ದಿನದ ದಾರಿಯ ರಸ್ತೆಯ ಸುಖಗೊಂಡರೆ, ಹಸ್ತಿನಾವತಿಗೆ ಹೋಗುವಷ್ಟು ದೂರ ಹೋದರೆ, ದೇಹದ ಭಾರ ಹೆಚ್ಚುವುದು. ಕಿವಿ, ಕಣ್ಣು, ಮೂಗು ಸೊಳ್ಳೆಗಳಲ್ಲಿ ಹಿಡಿದ ಧೂಳು ಇದಕ್ಕೆ ನಿದರ್ಶನಗೊಳ್ಳುವುದು. ಶಾಂರ್ಙ್ಗರವನು ತನ್ನ ಸುಖದ ನೆಲೆಯನ್ನು ಹೇಳಿದಾಗ ಶಾರದ್ವತನು ತಾನು ಪಡೆದ ಅನುಭವವನ್ನು ಹೇಳುತ್ತಿರುವನು.

ಅಭ್ಯಕ್ತಮಿವಸ್ನಾತಃ ಶುಚಿರಶುಚಿಮಿವ ಪ್ರಬುದ್ಧ ಇವಸುಪ್ತಂ ।
ಬದ್ಧಮಿವ ಸ್ವೈರಗತಿರ್ಜನಮಿಹ ಸುಖಸಂಗಿನಮವೈಮಿ ॥

ಎಲೆ ಶಾಂರ್ಙ್ಗರವ ಕೇಳು! ಇಲ್ಲಿನ ಜನರ ಸುಖವನ್ನು ಹೀಗೆ ತಿಳಿಯುತ್ತೇನೆ. ನೀನು ಬೆಂಕಿ ಹಿಡಿದ ಮನೆಯಂತೆ ಎಂದು ಹೇಳುವೆ. ನನ್ನ ಅಭಿಮತವಿದು. ಮಿಂದವನು ಎಣ್ಣೆ ಹಚ್ಚಿದಂತಿರುವನು. ಶುಚಿಯಾಗುಳ್ಳವನು ಅಶುಚಿಗೊಂಡಂತಿರುವನು. ಎಚ್ಚರಗೊಂಡವನು ನಿದ್ದೆಗೊಂಡಂತಿರುವನು. ಮನಬಂದಂತೆ ಚಲಿಸುವ ಸ್ವೈರಗತಿಯುವನು ಬಂಧನಗೊಂಡಂತಿರುವನು ಎಂದು ಅಭಿಪ್ರಾಯುವನ್ನು ಪ್ರಕಟಿಸುವನು.

ಕಾಳಿದಾಸನು ಇಲ್ಲಿ ನುಡಿದ ಮಾತುಗಳಲ್ಲಿ ಧ್ವನಿ ಇದೆ. ಸ್ನಾನಗೊಂಡ ಮನುಷ್ಯನು ತೈಲ ಹಚ್ಚಿದಂತಿದ್ದಾನೆ. ಎಂದು ಮೊದಲಾಗಿ ನುಡಿವನು. ನಾಗರಿಕ ಜನವು ಹೊರಗೆ ಆಡಂಬರದ ಉಡಿಗೆಯಿಂದ ಮಾತ್ರ ಶೃಂಗಾರಗೊಂಡು ಇರುವುದು. ಹೃದಯಶುಚಿಯಿಲ್ಲ. ಪಾಪಾಚರಣೆಯಲ್ಲಿ ಮಗ್ನರಿದ್ದು ಹೊರಗಿನ ಆಡಂಬರಗೊಂಡಿರುತ್ತಾರೆ. ಎಂದು ತಿಳುಹುತ್ತಿರುವನು. ವ್ಯಾಪಾರಿಗಳು ಮಾಡುತ್ತಿರುವ ಲೆಕ್ಕ ಪತ್ರಗಳ ಶುಚಿ ಇಂತಹುದು. ನಾಗರಿಕರಾದ ಹಲವು ಮಂದಿಗಳು ತೋರುತ್ತಿರುವ ವರ್ತನೆ ಈ ರೀತಿಯದು.

ಶುಚಿಯಾದವನು ಅಶುಚಿಯಿಂದಿರುವನು ಎಂದು ಹೇಳುವ ನುಡಿ ಇನ್ನೂ ಆಳ. ಪತಿ ಪತ್ನಿಯರಲ್ಲಿ ಬಳಸಿರುವ ವ್ಯವಹಾರ ಗತಿಗಳು ಇಂತ

ಹವು. ಅದಲ್ಲದೆ ಒಬ್ಬನನ್ನು ಕಂಡು ಇನ್ನೊಬ್ಬನು ಅನ್ಯಥಾ ಎಣಿಸುವನು ಶುಚಿಯಾದ ಧರ್ಮದ ಹೆಂಗಸನ್ನು ಕಂಡು ನಾಗರಿಕನನ್ಯಥಾ ಭಾವಿಸುವನು. ಇದು ನಾಗರಿಕ ಜೀವನದ ಒಂದು ನೆಲೆ. ಪರಸ್ಪರ ಕಾಣುವ ದೃಷ್ಟಿ ಕಾಮಾಂಧತೆಯಿಂದ ಕೂಡಿದ್ದು.

ಎಚ್ಚರಗೊಂಡವನು ನಿದ್ದೆಗೊಂಡಂತೆ ಇರುವನು ಎಂಬ ನುಡಿ ಇನ್ನೂ ವಿಶಾಲ. ನಗರದಲ್ಲಿ ಉತ್ತಮ ಜ್ಞಾನಿಗಳಾದ ಎಚ್ಚರಗೊಂಡ ಮನುಷ್ಯರಿದ್ದಾರೆ. ಅವರು ನಿದ್ದೆಗೊಂಡಂತೆಯೇ ಇರುವರು. ಅನ್ಯಾಯ ವರ್ತನೆಯನ್ನು ನಿಶೇಧಿಸುತ್ತಿಲ್ಲ. ತಪ್ಪುಗಳನ್ನು ಕಂಡು ಕಣ್ಣು ಚಿಮ್ಮಿ ಸುಮ್ಮನಿರುವರು. ತಿಳಿದವರ ಧರ್ಮ ಅನ್ಯಾಯ ಅನೀತಿಗಳಾಗದಂತೆ ನೋಡುವುದು. ಎಚ್ಚತ್ತ ಅಧಿಕಾರಿಗಳ ಧರ್ಮ ನಗರದಲ್ಲಿ ತಪ್ಪಾಗದಂತೆ ನೋಡುವುದು. ಇದನ್ನು ಬಿಟ್ಟು ಏನಾದರೂ ಸುಮ್ಮನಿದ್ದು ಕೊಳ್ಳುವುದು ನಗರದ ಅಧಿಕಾರಿಗಳ ನೆಲೆ. ತಪ್ಪುಗಳನ್ನು ಕಾಣರು. ಸರಕಾರದ ನ್ಯಾಯ ನೀತಿಯನ್ನು ತಿಳಿದವರಿದ್ದು ತಿಳಿಯದವರಂತಿರುತ್ತಾರೆ. ಆಗುತ್ತಿರುವ ಅನ್ಯಾಯಗಳನ್ನು ಕಣ್ಣಲ್ಲಿ ಕಂಡರೂ ನಿದ್ದೆಗೊಂಡವರಂತೆ ನಡೆಯುತ್ತಿರುವರು. ಕರ್ತವ್ಯದಲ್ಲಿದ್ದು ಕರ್ತವ್ಯದ ರಕ್ಷಣೆಯನ್ನು ಮಾಡುತ್ತಿಲ್ಲ ಎಂದು ಸ್ಪಷ್ಟವಾಗಿ ಹೇಳುವನು. ಇಂದಿನ ಭಾರತ ಶಿಕ್ಷಿತ ಪುರುಷರು ಇಂತಹರಲ್ಲವೇ!

ಸ್ವೈರಗತಿಯುವನು ಬದ್ಧನಾದಂತೆ ಇಲ್ಲಿನ ಸುಖ ಎಂದು ಹೇಳುವನು. ತನ್ನ ಇಚ್ಛೆಯಿಂದ ನಡೆಯುತ್ತಿರುವ ಮನುಷ್ಯನಿಗೆ ನಗರದಲ್ಲಿ ಹಾಗೆ ನಡೆಯಲು ಸಾಧ್ಯವಿಲ್ಲ. ಸಾವಿರಾರು ವಾಹನಗಳ, ಜನರ ಭಯವಿದೆ. ಸ್ವತಂತ್ರ ವರ್ತನೆಯವನು ನಗರಕ್ಕೆ ಸೇರಿದರೆ ಆತನ ಜೀವನ ಪರಾಶ್ರಯವನ್ನು ಸೇರಿತು. ಹಳ್ಳಿಯ ಒಕ್ಕಲಿಗನು ನಗರಕ್ಕೆ ಸೇರಿದರೆ ಪರಾವಲಂಬನೆಯೇ ಗತಿ. ಸ್ವಾವಲಂಬನೆಯ ವೃತ್ತಿಯನ್ನು ಅನುಸರಿಸಲು ಹಳ್ಳಿಗಳೇ ಸಾಧಕಗಳು. ನಗರಗಳಲ್ಲ. ಯಾವ ವಿದ್ಯಾವಂತನೂ, ಕಲಿಯುವನೂ ನಗರಕ್ಕೆ ಸೇರಿದರೆ ಪರಾವಲಂಬಿಯಾಗುತ್ತಾನೆ .ರಚನಾವಸ್ತುಗಳ ಉಪಕರಣಗಳು ಹಳ್ಳಿಗಳಿಂದಲೇ ದೊರೆಯಬೇಕು. ಉಣ್ಣಲಿರುವ ಕೂಳಿನ ಸಾಮುಗ್ರಿಗಳೂ ಹಳ್ಳಿಗಳಿಂದ ಬರಬೇಕು. ಇದರಿಂದ ಮಾನವನ ಬಾಳ್ವೆ ನಗರಕ್ಕೆ ಸೇರಿದೊಡನೆ ಪರಾವಲಂಬಿಯಾಗುತ್ತದೆ. ಇಂತಹ ಸುಖ ನಾಗರಿಕರ ಸುಖ ಎಂದು ಕಾಳಿದಾಸನು ಹೇಳುತ್ತಿರುವನು.

ಶಿಕ್ಷಣ ವಿಷಯದಲ್ಲೂ ಆಶ್ರಮ ಶಿಕ್ಷಣವೇ ಮೇಲೆಂದು ಕಾಳಿದಾಸನು ಶಾಕುಂತಳದಲ್ಲಿ ಹೇಳುತ್ತಿರುವನು.

ಪರಾತಿಸಂಧಾನಮಧೀಯತೇಯೈರ್ವಿದ್ಯೇತಿ ತೇ ಸಂತು ಕಿಲಾಪ್ರವಾಚಃ ॥
ಈ ಮಾತು ಶಾಂರ್ಙ್ಗರವನ ನುಡಿ. ನಾಗರಿಕ ಶಿಕ್ಷಣ ಪರ ವಂಚನೆಗೆ. ಶಿಕ್ಷಣದ ಉದ್ದೇಶ ಇದಲ್ಲ. ನಿಯಮಪೂರ್ವಕ ಆಶ್ರಮದ ಆಚರಣೆಯು ಬಾಳಿನಿಂದ ಕೂಡಿ ಅಂತೆ ಕರ್ತವ್ಯದಿಂದ ನಡೆಯುವುದು. ಈ ಅಭ್ಯಾಸ ಆಶ್ರಮ ಶಿಕ್ಷಣದಿಂದಲಾಗುವುದು. ಆಚರಣೆ ನಿಯಮ ವರ್ತನೆಗಳಿರದ ಶಿಕ್ಷಣ ಪ್ರಯೋಜನಕಾರಿಯಲ್ಲ

ಬಾಪೂಜಿ ಇದರಿಂದಲೇ ವಾರ್ಧಾಶಿಕ್ಷಣಕ್ಕೆ ಹೊರಟಿದ್ದಾರೆ. ಇಂತೆಯೇ ಶಾಂತಿನಿಕೇತನದ ಗುರುದೇವನೂ ಇದನ್ನು ಬಯಸಿರುವನು. ಕಾಳಿದಾಸನು ಈ ರೀತಿ ನಾಗರಿಕ ಸುಖ ವಿಷಯವನ್ನು ವಿಚಾರಪೂರ್ವಕ ಹೇಳಿರುತ್ತಾನೆ. ಇದನ್ನು ತಿಳಿದವರಾಗುವುದು ಮುಖ್ಯ.



## ಉಪಮಾ ಕಾಳಿದಾಸಸ್ಯ

ಕಾಳಿದಾಸನ ಗ್ರಂಥಗಳನ್ನೋದಿ ಅಲಂಕಾರಪ್ರಿಯನೊಬ್ಬನು "ಉಪಮಾ ಕಾಳಿದಾಸಸ್ಯ" ಎಂದನು. ಉಪಮಾಲಂಕಾರ ರಚನೆ ಕಾಳಿದಾಸನದು ಮೇಲು. ಉಳಿದವರ ಉಪಮಾಲಂಕಾರ ಕಾಳಿದಾಸನ ಉಪಮಾಲಂಕಾರದ ಮುಂದೆ ನಿಸ್ಸಾರ ಎಂಬ ಭಾವನೆಯು ಇದರಿಂದ ಉಂಟಾಗುತ್ತಿರುವುದು. ಉಪಮೆಯೆಂಬುದು ಅಲಂಕಾರಗಳಲ್ಲಿ ಪ್ರಧಾನವಾದ ಅಲಂಕಾರ. ಇದಕ್ಕೆ ಲಾಕ್ಷಣಿಕರಲ್ಲಿ ಮೊದಲನೆಯ ಸ್ಥಾನ. ಉಳಿದವು ಇದರ ಹಿಂದೆ ಬಂದವುಗಳು. ಕಾವ್ಯದ ಸೌಂದರ್ಯವು ಎರಡು ಬಗೆಯಿಂದಿದೆ. ಹೊರ ಒಳ ಚೆಲುವೇ ಅಲಂಕಾರ. ಹೊರ ಒಳ ಚೆಲುವುಗಳು ತುಂಬಿದರೆ ಆ ಕಾವ್ಯ ವನಿತೆ ಎಲ್ಲರನ್ನೂ ಸೆಳೆಯುವಳು.

"ಕಾವ್ಯ ಶೋಭಾಕರಾನ್ ಧರ್ಮಾನ್ ಅಲಂಕಾರಾನ್ ಪ್ರಚಕ್ಷತೇ ॥"

ಎಂದು ಅಲಂಕಾರದ ಕುರಿತು ದಂಡಿಯು ಹೇಳಿರುವನು. ಕಾವ್ಯಶೋಭೆಯನ್ನು ಕೊಡುವವೇ ಅಲಂಕಾರಗಳು ಎಂದು ಇದರಿಂದ ತಿಳಿಯಬರುತ್ತದೆ. ಕಾವ್ಯದ ಬೆಡಗು ಅಲಂಕಾರದಿಂದ. ಅಲಂಕಾರಗಳ ರಚನೆ ಕವಿಯ ಭಾವನೆಯನ್ನು ಜನತೆಗೆ ಸ್ಪಷ್ಟಗೊಳಿಸುವುದಕ್ಕೆ. ಈ ಅಲಂಕಾರಗಳಿಂದ ಕವಿಯ ಭಾವನೆ ಅರ್ಥಗೊಂಡು ಸ್ಪಷ್ಟವಾಗಿ ರೂಪುಗೊಳ್ಳುತ್ತದೆ. ಕವಿ ತನ್ನ ವಿಚಾರವನ್ನು ಬಳಸುವಲ್ಲಿ ಆತನಿಗೆ ಅಲಂಕಾರಗಳ ಅಗತ್ಯವಿದೆ. ಅಲಂಕಾರವನ್ನು ಅರ್ಥವು ರೂಪುಗೊಳ್ಳಲಾಗಿಯೇ ರಚಿಸಲಾಗುವುದು. ವಿಚಾರದ ಸ್ಪಷ್ಟವಾದ ರೂಪು ಅಲಂಕಾರಗಳಿಂದ ಹೊಳೆಯುತ್ತದೆ. ಇದನ್ನು ಕವಿಗಳು ಬಳಿಸಿದ ಅಲಂಕಾರದಿಂದ ತಿಳಿಯಬೇಕು.

ಕಾವ್ಯದ ಚೆಲುವು ಎರಡು ವಿಧದಿಂದಿರುವುದು. ಒಳ ಹೊರ ಈ ಎರಡು ಬಗೆಯಿಂದ ಚೆಲುವಿದೆ. ಮಾನವನ ತೊಡುಗೆಗೆ ಶಬ್ದಾಲಂಕಾರಗಳನ್ನು ಪ್ರಾಚೀನರು ಹೋಲಿಸಿರುವರು. ತೊಡುಗೆಯ ಹೋಲಿಕೆಯನ್ನು ಶಬ್ದಾಲಂಕಾರಗಳಿಗೆ ಕೊಡಲಾಗುವುದಿಲ್ಲ. ಅಂಗಕ್ಕೆ ತೊಡಿಸುವ ವೇಷ ಭೂಷೆಗಳನ್ನು ಪ್ರತ್ಯೇಕಿಸ ಬರುವುದು. ಅಂತೇ ಕಾವ್ಯದ ಶಬ್ದಾಲಂಕಾರವನ್ನು ಅದರಿಂದ ಬೇರೆ ಇಡಲು ಬರುವುದಿಲ್ಲ. ಮಾನವನ ದೇಹದ ಹೊರ ಸೌಂದರ್ಯದಂತೆ ಶಬ್ದಾಲಂಕಾರಗಳಿರುತ್ತವೆ. ಅವು ಅನುಪ್ರಾಸಾದಿಗಳು. ಈ ಅನುಪ್ರಾಸಗಳು ಕಾವ್ಯಕ್ಕೆ ಬೆಡಗನ್ನು ಕೊಡುತ್ತವೆ ಹೊರ ಚೆಲುವು ಎಷ್ಟೇ ಇದ್ದರೂ ಒಳ ಚೆಲುವು ಇಲ್ಲದಿದ್ದರೆ ಅದು ಉತ್ತಮ ಕಾವ್ಯವೆನಿಸಲಾರದು. ಅಂತೆಯೇ

ಮಾನವನು ಮಾನಸಿಕವಾದ ಕೃತ್ಯದ ಒಳ ಸೌಂದರ್ಯದಿಂದ ಕೂಡಿರದಿದ್ದರೆ ಆತನು ಜನತೆಯಲ್ಲಿ ಸ್ಥಾನವನ್ನು ಪಡೆಯಲಾರನು. ಚೆಲುವಾದ ನೀರ ಗುಳ್ಳೆಯನ್ನು ಕಂಡಂತೆ ಇದರ ಫಲ. ಅದು ಕ್ಷಣಿಕ. ಕ್ಷಣಿಕವಿದ್ದು ಜೀವನ ಸುಖಕ್ಕೆ ಬೀಳಲಾರದು. ಹೊಂಗಾರೆಯ ಹೂವು ಕೆಂಪಿನಿಂದ ರಂಜಿಸಿದ್ದರೂ ಅದು ವಾಸನೆಯಿರದೆ ದುರ್ಗಂಧಪೂರ್ಣವಾಗಿದ್ದು ಸ್ವೀಕಾರ್ಯವೆನಿಸುವುದಿಲ್ಲ. ಇಂತೆಯೇ ಬಾಹ್ಯ ಸೌಂದರ್ಯದ ಫಲ. ಉಪಮೆ ಒಳ ಚೆಲುವು. ಇದನ್ನೇ ಅರ್ಥಾಲಂಕಾರವೆಂದು ಹೇಳುವೆವು. "ಕಿಟ್ಟನು ಗುಟ್ಟಿನಿಂದ ಅಟ್ಟಕ್ಕೆ ಹತ್ತಿ ಗಟ್ಟಿಯಾದ ರೊಟ್ಟಿ ತುಂಡನ್ನು ಮುಟ್ಟಿ ಮುರಿಯಲಾರದೆ ಗಟ್ಟಿಯಾದ ಹಲ್ಲುಗಳಿಂದ ಕಡಿದನು." ಇಲ್ಲಿ ಶಬ್ದದ ಪ್ರಾಸವು ಕಂಡು ಬರುತ್ತಿದೆ. "ಚಂದ್ರನ ಚಾರು ಚಂಚಲ ಚಂದ್ರಿಕಾ ಕಿರಣಗಳು ಲಲನೆಯರ ಲಾವಣ್ಯ ಲೀಲಾ ವಿಲಾಸಕ್ಕೊಲವಿಡಿಸಿದವು." ಇಂತಹ ವಾಕ್ಯಗಳಲ್ಲಿ ಕಾಣುವುದು ಕೇವಲ ಬಾಹ್ಯ ಸೌಂದರ್ಯ. ಇದನ್ನೇ ಶಬ್ದಾಲಂಕಾರಗಳೆಂದು ಕರೆವೆವು.

ಪ್ರತಿ ಮಾನವ ವ್ಯಕ್ತಿಯ ಬಾಹ್ಯ ರಚನೆಯಲ್ಲಿ ಭೇದವಿದ್ದೇ ಇದೆ. ಕವಿಗಳ ರಚನೆಯಲ್ಲಿ ಇದೇ ಭೇದವನ್ನು ಕಾಣುವೆವು. ಒಳ ಸೌಂದರ್ಯವು ಕಾವ್ಯದಲ್ಲಿ ಅರ್ಥರೂಪವಾದುದು. ಮಾನವನಲ್ಲಿ ಅದು ಆತನ ಮಾನಸಿಕ ಹೃದಯದ ವಿಶಾಲತೆಯನ್ನು ಅವಲಂಬಿಸಿದೆ. ಗುಣವೃತ್ತಿಯನ್ನು ಹೊಂದಿಕೊಂಡಿದೆ. ಎಷ್ಟೇ ಸುಂದರನಿದ್ದರೂ ಆತನ ಗುಣವರ್ತನೆಗಳೇ ಮುಖ್ಯ. ಅದು ಆತನ ಹೃದಯ ವಿಶಾಲತೆಯನ್ನು ತೋರಗೊಟ್ಟು ಒಳ ಚೆಲುವನ್ನು ಸ್ಪಷ್ಟಪಡಿಸುತ್ತದೆ. ಇಂತೆಯೇ ಅರ್ಥಾಲಂಕಾರಗಳು ಕಾವ್ಯದ ಒಳಬಗೆಯನ್ನು ಪ್ರಕಟಿಸುವವು. ಮಾನವನಲ್ಲಿರುವ ದಯೆ, ಕ್ಷಮೆ, ಸತ್ಯ, ಅಹಿಂಸೆಯೇ ಮೊದಲಾದ ಶತಾಧಿಕವಾದ ಹೃದಯಭಾವನಾ ಸೌಂದರ್ಯಗಳಂತೆ ಕಾವ್ಯದ ಅಲಂಕಾರಗಳನ್ನು ಲೆಕ್ಕದಿಂದ ಹೇಳಬರುವುದಿಲ್ಲ. ಪ್ರತಿ ಜನಾಂಗದ ಉಡಿಗೆ ತೊಡಿಗೆ, ಹೃದಯ ಸೌಂದರ್ಯ ಎಷ್ಟೆಂದು ಹೇಳಬರುವುದಿಲ್ಲ. ದಿನೇ ದಿನೇ ಉನ್ನತಿಗೆ ಬರುತ್ತಿರುವ ಮಾನವನು ದೇಹ ಸೌಂದರ್ಯವನ್ನೂ ಮಾನಸಿಕ ಸೌಂದರ್ಯವನ್ನೂ ಹೆಚ್ಚಿಸುತ್ತಿರುವನು. ಇದರಿಂದ ಅಲಂಕಾರಗಳ ಇತಿಮಿತಿಯನ್ನು ಕೊಡಲಾಗುವುದಿಲ್ಲ. ಅವುಗಳು ಬೆಳೆಯುತ್ತಿವೆ ಎಂದೆನ್ನಬೇಕು.

ಕಾಳಿದಾಸನ ಉಪಮೆ ವಿಶೇಷವಾದುದು. ಇದರ ಸೌಂದರ್ಯವನ್ನು ಅವನಲ್ಲೇ ಕಾಣಬೇಕು. ಭಾವನೆಯನ್ನು ವ್ಯಕ್ತಗೊಳಿಸುವಲ್ಲಿ ಅಲಂಕಾರಗಳ

ಬಳಸುವಿಕೆಯು ಕವಿಗಳಿಗೆ ಅತ್ಯಗತ್ಯ. ಕಾಳಿದಾಸನು ಈ ವಿಷಯದಲ್ಲಿ ಉಪಮೆಯನ್ನು ಕೊಟ್ಟು ಕವಿ ಲೋಕಕ್ಕೆ ಮೆಚ್ಚಿನವನಾಗಿರುತ್ತಾನೆ.

ಶಕುಂತಳೆ ಕಣ್ವಾಶ್ರಮದಲ್ಲಿದ್ದಳು. ಈಕೆ ನಾರುಡೆಯನ್ನು ತೊಟ್ಟಿದ್ದಳು. ನಾರುಡೆಯನ್ನು ತೊಟ್ಟ ಶಕುಂತಳೆಯನ್ನು ಕಂಡು ದುಷ್ಯಂತನು ಆಕೆಯ ಸೌಂದರ್ಯವನ್ನು ಬಣ್ಣಿಸತೊಡಗುವನು.

ಸರಸಿಜ ಮನುವಿದ್ಧಂ ಶೈವಲೇನಾಪಿರಮ್ಯಂ
ಮಲಿನಮಪಿ ಹಿಮಾಂಶೋಃ ಲಕ್ಷ್ಮ ಲಕ್ಷ್ಮೀಂತನೋತಿ ।
ಇಯಮಧಿಕಮನೋಜ್ಞಾವಲ್ಕಲೇನಾಪಿತನ್ವೀ
ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ ॥

"ತಾವರೆ ಹಾವಸೆಯಿಂದ ಕೂಡಿದ್ದರೂ ಅದು ಆಕರ್ಷಕವಾಗಿರುತ್ತದೆ. ಚಂದ್ರನಲ್ಲಿ ಮಲಿನವಾದ ಚಿಹ್ನೆಯು ಇದ್ದರೂ ಅದು ಚಂದ್ರನಿಗೆ ಬೆಡಗನ್ನು ಕೊಡುತ್ತದೆ. ಈ ಶಕುಂತಳೆ ನಾರುಡೆಯನ್ನು ಧರಿಸಿದವಳಿದ್ದರೂ ಅತಿ ಮನೋಹರಿಯಾಗಿರುವಳು. ಚೆಲುವಾದ ಆಕೃತಿಯುಳ್ಳವರಿಗೆ ಯಾವುದು ತಾನೇ ಅಲಂಕಾರಗೊಳ್ಳುವುದಿಲ್ಲ." ಎಂದು ಶಕುಂತಳೆಯ ಚೆಲುವನ್ನು ನಾನಾರೂಪವಾದ ಪ್ರತಿವಸ್ತೂಪಮೆಗಳಿಂದ ಕಾಳಿದಾಸನು ಚಿತ್ರಿಸಿರುವನು. ತಾ ವ ರೆ ಹಗಲು ಮಾತ್ರ ಶೋಭಿಸುವ ವಸ್ತು ಎಂದು ಕವಿಗೆ ಎರಡನೆ ಉದಾಹರಣೆಯನ್ನು ಎತ್ತಿ ಹೇಳಬೇಕಾಯಿತು. ಚಂದ್ರನನ್ನು ಹೇಳಿದ. ರಾತ್ರಿ ಕಂಡು ಬರುವವನು ಚಂದ್ರ. ಶಕುಂತಳೆ ಸದಾ ಕಾಲ ಕಾಣಬರುವಳು. ಅವುಗಳಿಗಿಂತಲೂ ಮಿಗಿಲಾಗಿ ಈಕೆ ಚೆಲುವುಗೊಂಡಿದ್ದಾಳೆ. ಅತಿ ಮನೋಹರಿಯಾಗಿದ್ದಾಳೆ. ನಾರುಡೆಯುಟ್ಟಿದ್ದರೂ ಬಹಳವಾದ ಆಕರ್ಷಕತೆ ಈಕೆಯಲ್ಲಿದೆ· ಸೌಂದರ್ಯವಿದೆ—ಎಂದು ಕವಿ ಹೇಳುವನು. ಶಕುಂತಳೆ ಹಗಲಿರುಳೂ ಕಾಣ ಸಿಗುವವಳು. ಅನುಪಮ ರೂಪವತಿ ಎಂಬುದನ್ನು ಸೂಚಿಸುವುದರೊಂದಿಗೆ ಈಕೆಯ ಹುಟ್ಟನ್ನು ಕವಿಗೆ ಹೇಳಬೇಕಿದೆ. ಒಂದು ಭೂಮಿಯ ವಸ್ತುವನ್ನು ತೆಗೆದ. ಇನ್ನೊಂದು ಆಕಾಶದ ವಸ್ತುವನ್ನು ಎತ್ತಿದನು. ಶಕುಂತಳೆಯ ಸೃಷ್ಟಿ ಭೂಮಿ ಆಕಾಶಗತ ವಿಶ್ವಾಮಿತ್ರ ಮೇನಕೆಯರಿಂದ ಉಂಟಾಗಿದೆ. ಈಕೆ ಭೂಮ್ಯಾಕಾಶಗಳ ಜ್ಯೋತಿಗಳಿಂದ ಉದಿಸಿದವಳಿದ್ದು ಇನ್ನೂ ಮನೋಹಜನಕಳಾಗಿರುವಳು ಎಂಬ ಅರ್ಥ ಪುಷ್ಟಿಯನ್ನು ಕೊಡಲು ಕವಿಯು ಈ ಉಪಮೆಗಳನ್ನು ತಂದಿರುವನು ಉಪಮೆಯ ಮಹತ್ವವನ್ನು ಇಲ್ಲಿ ಕಾಣುವೆವು.

ಶಕುಂತಳೆ ಮದುವೆಯಾಗತಕ್ಕ ಬಾಲಿಕೆ. ಮರವನ್ನು ಆಶ್ರಯಿಸ ಲಿರುವ ಲತೆಯಂತೆ ಮೋಹಕಳಾಗಿರುವಳು. ಎಂದು ಉಪಮಾಲಂಕಾರ ದಿಂದ ಕಾಳಿದಾಸನು ದುಷ್ಯಂತನ ಮಾತುಗಳಲ್ಲಿ ಹೇಳುತ್ತಾನೆ.

ಅಧರಃ ಕಿಸಲಯರಾಗಃ ಕೋಮಲ ವಿಟಪಾನುಕಾರಿಣೌ ಬಾಹೂ।
ಕುಸುಮಮಿವ ಲೋಭನೀಯಂ ಯೌವನಮಂಗೇಷು ಸನ್ನದ್ಧಂ ॥

ಶಾಕುಂತಳೆಯ ತುಟಿ ಎಳೆ ಚಿಗುರಿನಂತೆ ಕೆಂಪಿಡಿದಿದೆ. ಕೈಗಳು ಮರದ (ಬಳ್ಳಿಯ) ಶಾಖೆಗಳನ್ನು ಹೋಲುತ್ತಿರುವವು. ದೇಹದಲ್ಲಿ ತುಂಬಿದ ಯೌವ ನವು ಹೂವಿನಂತೆ ಆಕರ್ಷಕ ಎಂದು ಉಪಮೆಯಿಂದ ಹೇಳುತ್ತಾನೆ. ಹೂವಿನ ಆಕರ್ಷಕತೆ ನವತರುಣಿಯರಲ್ಲಿ ಎಂದು ಬೇರೆ ಹೇಳ ಬೇಕೆ?

ದುಷ್ಯಂತನು ತನ್ನ ಗೆಳೆಯ ಮಾಢವ್ಯನಿಗೆ ಶಾಕುಂತಳೆಯ ರೂಪವನ್ನು ಹೇಳ ತೊಡಗಿದನು.

ಅನಾಘ್ರಾತಂ ಪುಷ್ಪಂ ಕಿಸಲ ಯಮಲೂನಂಕರರುಹೈಃ
ಅನಾವಿದ್ಧಂ ರತ್ನಂ ಮಧುನವಮನಾಸ್ವಾದಿತ ರಸಂ।
ಅಖಂಡಂ ಪುಣ್ಯಾನಾಂ ಫಲಮಿವ ತದ್ರೂಪಮನಘಂ
ನ ಜಾನೇ ಭೋಕ್ತಾರಂ ಕಮಿಹ ಸಮುಸ್ಥಾಸ್ಯತಿ ವಿಧಿಃ ॥

"ಎಲೆ ಗೆಳೆಯ ಕೇಳು. ಬ್ರಹ್ಮನ ಕೈ ಚಳಕವನ್ನು ಆಕೆಯಲ್ಲಿ ಕಾಣಬಹುದು. ಆಕೆಯ ರೂಪು ಬಹಳ ಮನೋಹರವಾಗಿದೆ. ಚೆಲುವೆಯರಿಗೆಲ್ಲಾ ಇವಳ ರೂಪದಿಂದ ತಿರಸ್ಕೃತಿಯೇ ಉಂಟಾಗಿದೆ. ಅದನ್ನೇ ನಿನಗೆ ಹೇಳುವೆ. ಆಕೆಯ ರೂಪು ಮೂಸದ ಹೂವಿನಂತಿದೆ. ಚಿವುಟದ ಚಿಗುರಿನಂತಿದೆ. ಸಾಣೆಗೆ ಹಿಡಿಯದ ರತ್ನದಂತಿದೆ. ಅಸ್ವಾದಿಸದ ನೂತನವಾದ ಜೇನಿನಂತಿದೆ. ಅಖಂಡವಾದ ಪುಣ್ಯದ ಫಲದಂತೆ ಆಕೆಯ ರೂಪು ಮಂಗಲಕರವಾಗಿದೆ. (ಅನಘ–ಪಾಪರಹಿತ) ಬ್ರಹ್ಮನು ಅದನುಣ್ಣುವ ಭೋಕ್ತಾರನನ್ನು ಯಾರನ್ನು ಮಾಡುವನೋ ತಿಳಿಯಲಾರೆ" ಎಂದು ವರ್ಣಿಸುವನು.

"ಮೂಸದ ಹೂವಿನಂತೆ ಆಕೆ ಇದ್ದಾಳೆ" ಎಂದು ಕವಿ ಹೇಳಿದ ಅಲಂ ಕಾರಯುಕ್ತವಾದ ಮಾತು ಅತಿ ಮನೋಹರ. ಶಕುಂತಳೆ ಇದು ವರೆಗೆ ಅನ್ಯರಿಂದ ಸ್ವೀಕೃತಳಾದವಳಲ್ಲ. ಕೇವಲ ಅರಳಿ ನಿಂತಿರುವ ಆಕರ್ಷಕವಾದ ಕುಸುಮವೆಂದೇ ಹೇಳುವನು. ಈ ಹೋಲಿಕೆ ಮದುವೆಯಾಗದ ಶಕುಂತ ಳೆಯ ನವ ತಾರುಣ್ಯಕ್ಕೆ ಒಪ್ಪತಕ್ಕುದಾಗಿದ್ದು ಮೆಚ್ಚಿನದಾಗಿದೆ.

ಶಾಕುಂತಳೆಯ ರೂಪವು ಚಿವುಟದ ಚಿಗುರು. ಇಂತಹ ಅನುಪಮ ಹೋಲಿಕೆ ಆಕೆಯದು. ಹೊಸ ಚಿಗುರ ಬೆಡಗು ಎಂತಹುದೆಂದು ಸಸ್ಯ ಶಾಸ್ತ್ರಜ್ಞನರಿವನು. ಆಕೆ ಅಕ್ಷತಳು ಎಂಬುದು ಇದರಿಂದ ತಿಳಿಯಬರುವುದು.

ಸಾಣೆಗೆ ಹಿಡಿಯದ ರತ್ನವು ಪ್ರಕೃತಿಯ ನಿಸರ್ಗ ಮನೋಹರತೆಯಿಂದ ಕೂಡಿದ್ದು. ಅಂತೆಯೇ ಶಾಕುಂತಳೆ ಅಕೃತ್ರಿಮ ಸೌಂದರ್ಯದಿಂದ ತುಂಬಿದಾಕೆ. ನೈಜವಾದ ಚೆಲುವು ಆಕೆಯಲ್ಲಿದೆ; ಎಂಬ ವಿಚಾರವನ್ನು ಕವಿ ಈ ರೂಪಕಗಳಿಂದ ಹೇಳುತ್ತಿರುವನು. ಈ ಉದಾಹರಣೆಗಳಿಂದ ಕವಿಗೆ ತೃಪ್ತಿ ಇಲ್ಲ. ಹೂ ಬಾಡುವುದು. ಅದರ ಬಾಳು ಅಲ್ಪಕಾಲ. ಚಿಗುರು ಮುಂದೆ ಅದರ ಬಣ್ಣವನ್ನು ಬದಲಾಯಿಸುವುದು. ಅದು ಆ ಸೌಂದರ್ಯದಿಂದ ಉಳಿಯಲಾರದು. ಗನಿಯಿಂದ ಎತ್ತಿದ ರತ್ನ ಮುಂದೆ ಸಾಣೆಗೊಂಡು ರೂಪದಿಂದ ಬದಲುಗೊಳ್ಳುತ್ತದೆ. ನವಮಧು—ಹೊಸ ಜೇನು ಇನಿದಾದುದು. ಜೇನಿನ, ನವಆಸವಗಳ ರುಚಿ ಬೇರೆ. ಇವುಗಳನ್ನು ಹೋಲಿಸಿದ ಕವಿಗೆ ಶಕುಂತಳೆಯ ಸೌಂದರ್ಯ ಸಂಪತ್ತಿನ ವರ್ಣನೆ ತೃಪ್ತಿಜನಕವಾಗಲಿಲ್ಲ. ಕೂಡಲೇ ಅಖಂಡವಾದ ಪುಣ್ಯಫಲದಂತೆ ಆಕೆಯ ರೂಪು ಪಾವನವೆಂದು ಹೇಳಿದನು. ಪುಣ್ಯದ ಫಲವು ಮಾನವನನ್ನು ಸದಾಕಾಲ ಬಿಡದು. ಅವನಲ್ಲೇ ನೆಲೆದಿರುತ್ತದೆ. ಅಂತೆಯೇ ಆಕೆಯನ್ನು ಬಿಡದ ಸೌಂದರ್ಯ ಅಲ್ಲೇ ಪಾವನವಾಗಿ ನೆಲೆದಿದೆ ಎಂದು ಕವಿಯು ಹೇಳುತ್ತಿರುವನು. ಶಾಕುಂತಳಾ ರೂಪದ ವರ್ಣನೆ ಕೊಡುವಲ್ಲಿ ಈ ರೀತಿ ಅಲಂಕಾರಗಳನ್ನು ಹೇಳಿ ರೂಪವನ್ನು ಸ್ಪಷ್ಟಗೊಳಿಸುವನು.

ಕಣ್ವಾಶ್ರಮಕ್ಕೆ ದುಷ್ಯಂತನು ಬಂದನು. ಅಲ್ಲಿ ಶಕುಂತಲೆಯನ್ನು ಕಂಡನು. ಆಕೆಯ ಸೌಂದರ್ಯಕ್ಕೆ ಮರುಳಾದನು. ಅವಳಲ್ಲಿಯೇ ಮನ ಊರಿತು. ನಗರಕ್ಕೆ ಹಿಂದೆರಳುವ ಮನಸ್ಸು ಇಲ್ಲದಾಯಿತು.

ಗಚ್ಛತಿ ಪುರಃ ಶರೀರಂ ಧಾವತಿ ಪಶ್ಚಾದಸಂಸ್ತುತಂ ಚೇತಃ ।
ಚೀನಾಂಶುಕಮಿವ ಕೇತೋಃ ಪ್ರತಿವಾತಂ ನೀಯಮಾನಸ್ಯ ॥

ಎಂದು ನುಡಿವನು. ಎದುರು ಗಾಳಿಯ ಚೀನೀ ಬಟ್ಟೆಯ ಬಾವುಟದಂತೆ ನನ್ನ ದೇಹ ಮುಂದೆ ಹೋಗುತ್ತಿದೆ. ಚೇತನಾ ಶೂನ್ಯವಾದ ಮನಸ್ಸು ಹಿಂದೆ ಸರಿಯುತ್ತಿರುವುದು. ರಥದಲ್ಲಿ ನೆಟ್ಟ ಬಾವುಟದ ನೆಲೆ ಆತನದು. ರಥವು ಮುಂದೆ ಹೋಗುತ್ತಿದ್ದರೂ ಬಾವುಟ ಹಿಂದಕ್ಕೇ ಓಡುವುದು. ಶಕುಂತಲೆ

ಯಲ್ಲಿ ಉಂಟಾದ ಅನುರಾಗ ದುಷ್ಯಂತನನ್ನು ಈ ತೆರನಾಗಿಸಿತು. ಅನುರಕ್ತರ ಚಿತ್ರ ಇಲ್ಲಿ ಕಾಣುತ್ತದೆ. ಅನುರಕ್ತರ ಮನಸ್ಸು ಇಂತೆಯೇ ಆಗುತ್ತದೆ. ಧ್ವಜದ ಚೀನೀ ಬಟ್ಟೆಯ ನೆಲೆ ಅಧಿಕರಿಗೂ ಉಂಟಾಗುತ್ತಿರುವುದು. ಇಲ್ಲಿ ತೋರುವ ಉಪಮೆ ಸಾಮಾನ್ಯವಾದುದಲ್ಲ.

ಗಾಂಧರ್ವ ವಿವಾಹವು ಶಕುಂತಳಾ ದುಷ್ಯಂತರಿಗಾಯಿತು. ದುಷ್ಯಂತನಲ್ಲಿಗೆ ಕಾಶ್ಯಪನು ಶಿಷ್ಯರಿಂದೊಡಗೂಡಿದ ಶಕುಂತಲೆಯನ್ನು ಕಳುಹುವನು. ದೂರ್ವಾಸನ ಶಾಪದ ಮೂಲಕ ಆಕೆಯ ವಿವಾಹ ವಿಷಯವು ಮರೆತುಹೋಗಿದ್ದಿತು. ಮುನಿ ಶಿಷ್ಯರು ಸ್ವಪತ್ನಿಯನ್ನು ಸ್ವೀಕರಿಸ ಹೇಳಿದರು. ಆತನಿಗೆ ಶಕುಂತಲೆಯನ್ನು ನೋಡಿದ ಗುರುತೂ ಇಲ್ಲ ಈ ಹೊತ್ತಿನಲ್ಲಿ ದೀರ್ಘಾಪಾಂಗನೆಂಬ ಮೃಗ ಪೋತಕದ ಕತೆಯನ್ನು ಹೇಳುವಳು. "ನೀನು ಅದಕ್ಕೆ ಎಲೆಯ ದೊನ್ನೆಯಲ್ಲಿ ನೀರು ತುಂಬಿ ಹಿಡಿದೆ. ಅದು ಅದನ್ನು ಕುಡಿಯಲಿಲ್ಲ. ನಾನು ಅದೇ ದೊನ್ನೆಯ ನೀರನ್ನು ಹಿಡಿದೆ. ಅದಾಗ ಕುಡಿಯಿತು. ಆಗ ನೀನು 'ಎಲ್ಲರೂ ಸಮಾನ ಸ್ವಭಾವದವರಲ್ಲಿ ನಂಬುಗೆಗೊಳ್ಳುತ್ತಾರೆ' ಎಂದು ಗೇಲಿ ಮಾಡಿದೆ" ಎಂದು ಶಕುಂತಲೆಯು, ಹೇಳಲು "ವಿಷಯಿಗಳು ಇಂತಹ ಮಧುರ ವಚನಗಳಿಂದ ಮರುಳುಗೊಳಿಸುವರು" ಎಂದು ದುಷ್ಯಂತನು ತನ್ನ ಉತ್ತರವನ್ನು ಹೇಳಿದ. ಅದಾಗ ಶಕುಂತಳೆ **"ಕೋನಾಮ ತೃಣಚ್ಛನ್ನ ಕೂಪೋಪಮಸ್ಯತವಾನುಕೃತಿಂ ಪ್ರತಿಪತ್ಸ್ಯತೇ"** ಎಂದ ದುಷ್ಯಂತನಿಗೆ ಉತ್ತರಿಸುವಳು. ಹುಲ್ಲು ಮುಸುಕಿದ ಬಾವಿಯನ್ನು ಹೋಲುವ ಮನುಷ್ಯನು ನೀನು ಎಂಬ ಈ ಮಾತು ಬಹಳ ಚಂದವಾಗಿದೆ. "ತೃಣಚ್ಛನ್ನ ಕೂಪೋಪಮ" ಎಂಬ ಉಪಮೆ ದುಷ್ಯಂತನಿಗೆ. ಎಳೆ ಹುಲ್ಲು ಬಾವಿಗೆ ಮುಸುಕಿರಲು ಆ ಹುಲ್ಲನ್ನು ಮೇಯಲು ಹೋದ ಜಿಂಕೆ—ಇನ್ನಿತರ ಪ್ರಾಣಿಗಳು ಬಾವಿಯಲ್ಲಿ ಬಿದ್ದು ಕಷ್ಟಗೊಳ್ಳುವವು. ಅಂತೆಯೇ ನಿನ್ನ ಹೊರಚೆಲುವು ಮಾತಿನ ಮಲ್ಲತನದಿಂದ ಮರುಳಾದ ನಾನು ನಿನ್ನನ್ನು ಪರಿಣಯಿಸಿದೆ. ಬಾಳಿನ ಗತಿ ಕಷ್ಟಕ್ಕೀಡಾಯಿತೆಂದು ಧ್ವನಿಗೊಳ್ಳುವಂತೆ ಹೇಳುವ ಈ ಉಪಮೆ ಅತಿ ಮನೋಹರವಾಗಿದೆ. ಹೃದ್ಯವೂ ಎನಿಸಿದೆ. ದುಷ್ಯಂತನು ಈ ಮಾತಿನಿಂದ ಬಾಯಿ ಮುಚ್ಚಲಿಲ್ಲ. ಉತ್ತರವನ್ನು ಹೇಳುತ್ತಿರುವನು.

ವ್ಯಪದೇಶಮಾವಿಲಯಿತುಂ ಕಿಮೀಹ ಸೇ ಜನಮಿಮುಂಚ ಪಾತಯಿತುಂ।
ಕೂಲಂಕಶೇವ ಸಿಂಧುಃ ಪ್ರಸನ್ನಮಂಭಸ್ತಟ ತರುಂ ಚ ॥

"ದಡವನ್ನು ಕೊರೆದು ಹರಿಯುವ ನದಿಯು ಶುಭ್ರವಾದ ನೀರನ್ನೂ ದಂಡೆಯ ಮರವನ್ನೂ ಕಲಕಿಸಿ ಬೀಳಿಸಿ ಹೋಗುವಂತೆ ನನ್ನ ಕುಲ ಮತ್ತು ನನ್ನನ್ನು ಕಲಂಕಿಸಿ ಅಧಃಪತನಗೊಳಿಸಲೆಳಸುವೆಯಾ" ಎಂದು ಶಕುಂತಲೆಗೆ ಉತ್ತರವು ದೊರಕಿತು. ಇಲ್ಲಿ ಕಾಳಿದಾಸನು ಕೊಟ್ಟ ಉಪಮೆ ಅತಿ ಮನೋಹರ. ಮಳೆಗಾಲದ ನೀರು ತುಂಬಿದ ನೆರೆಯ ನದಿ ಶಕುಂತಳೆಯಾಗಿ ಬಿಡುವಳು. ನದಿಯು ಉಪಯೋಗ ಜನೋಪಕಾರಕ್ಕೆ. ಜನತೆಯ ಹಿತಕ್ಕಾಗಿ. ಅಂತೆಯೇ ಸ್ತ್ರೀ ಜೀವನ ಗೃಹಸ್ಥ ಧರ್ಮದಲ್ಲಿದ್ದು ಲೋಕೋಪಕಾರಗೊಳ್ಳಲು, ಸೇವಾ ಧರ್ಮವನ್ನು ಸಾಧಿಸಲು. ಇದಿರದೆ ಕುಲಕ್ಕೂ ಕೆಡುಕನ್ನುಂಟುಮಾಡುವ ಕಲಂಕವಿರಿಸುವ ಗಂಡನನ್ನು ಜೀವನದಿಂದ ಹಾಳಾಗಿಸುವ ಕೆಳಕ್ಕಿಳಿಸುವ ಹೆಣ್ಣಿನ ದಾಂಪತ್ಯ ಜೀವನ ಎಷ್ಟು ಸುಖಮಯ? ಮೇರೆ ತಪ್ಪಿ ಹೆಂಗುಸರು ನಡೆಯುವುದು ದಂಡೆಯನ್ನು ಕೊರೆವಂತೆ ಮನೆಯಲ್ಲಿ ಜಗಳವಿಕ್ಕಿ ಕೊರೆಯು ತ್ತಿರುವುದು,—ಗಂಡನನ್ನು ಮನದ ಹೊನಲು—ಮನೋ ಸ್ವಭಾವಗಳಿಗೆ ವಿಾಸಲಾಗಿಸಿ ಕುಲದಿಂದಲೇ ತಪ್ಪಿಸುವ, ಜೀವನದಿಂದ ಕೆಳಕ್ಕಿಳಿಸುವ, ಸಂಸಾರಿಕ ಸುಖದಿಂದ ಪತನಗೊಳಿಸುವ, ನಾರಿಯರು ಇಂದೆಷ್ಟಿಲ್ಲ? ಮನೆ ಮನೆ ಪಾಲುಗಳುಂಟಾಗಿ ಕುಟುಂಬ ಸಂಪತ್ತು ಋಣಕ್ಕೆ ಬಿದ್ದು ಪುರುಷರ ಜೀವನ ಪತನವಾಗಿರುವುದನ್ನು ಅಲ್ಲಲ್ಲಿ ಕಾಣುತ್ತಿರುವೆವು. ಸಮುದಾಯ ಕ್ಕೊಪ್ಪುವ ಉಪಮೆ ಇಲ್ಲಿದೆ.

> ಸ್ಮರ ಏವ ತಾಪ ಹೇತುಃ ಸ ಏವ ನಿರ್ವಾಪತಯಿತಾಚ ಮೇಜಾತಃ ॥
> ದಿವಸ ಇವಾರ್ಧ ಶ್ಯಾಮಃ ತಪಾತ್ಯಯೇ ಜೀವಲೋಕಸ್ಯ ॥
>
> (ಶಾಕುಂತಲ)

ಈ ಮಾತನ್ನು ದುಷ್ಯಂತನು ಹೇಳುವನು. "ಜನತೆಗೆ ಗ್ರೀಷ್ಮಾವಸಾನದ ಮುಗಿಲು ಕವಿದು ಅರೆಗತ್ತಲೆಯಾದ ದಿನದಂತೆ ಮನ್ಮಥನೇ ನನಗೆ ತಾಪಕ್ಕೆ ಕಾರಣನಾದನು. ಆತನೇ ಅದನ್ನು ಹೋಗಲಾಡಿಸುವವನಾದನು" ಎಂದು ಶಕುಂತಲಾ ವಿಷಯವಾಗಿ ಹೇಳುವನು. ಕಾಮನಿಂದ ತಾಪಗೊಂಡ ದುಷ್ಯಂ ತನಿಗೆ ಶಕುಂತಲೆಯ ನಲ್ಮೆ ಈ ರೀತಿಯನ್ನುಂಟು ಮಾಡಿತು. ಇಲ್ಲಿ ತೋರಿದ ಉಪಮೆ ಅತಿ ಸುಂದರ. ಪ್ರಕೃತಿಯಿಂದ ಆಯ್ದ ಸುಮನೋಹರ ವಸ್ತು.

ಕವಿಗಳು ಉಪಮೆಯನ್ನು ತೋರುವಲ್ಲಿ ಪ್ರಕೃತಿಯ ವಸ್ತುವನ್ನು ಎತ್ತ ಬೇಕು. ಅದರ ಹೊರತು ಕಲ್ಪಿತ ಉಪಮೆ ಹಿತವಲ್ಲ. ಪ್ರಕೃತಿಯನ್ನು ಅಧ್ಯಯನ ಗೈಯದೆ ಕವಿಯು ಕವಿಯೆನಿಸನು. ಪ್ರಕೃತಿ ರಮಣೀಯತೆ

ಯನ್ನು ಕಾಣದೆ ಬರೆದ ಗ್ರಂಥರಾಶಿ ನಿರರ್ಥಕ. ಜೀವನದಲ್ಲಿ ನಾವು ಪ್ರಕೃತಿಯಿಂದ ಪಡೆವ ಲಾಭ ಅಪರಿಮಿತ. ಕವಿ ಮತ್ತು ವಿಜ್ಞಾನಿ ಇವರಿಬ್ಬರೂ ಪ್ರಕೃತಿಯ ಮೇಲೆಯೇ ತಮ್ಮ ಶೋಧನೆಯನ್ನು ನಡೆಸುವರು. ಕವಿ ನಡೆಸುವ ಶೋಧೆ ಅದರಿಂದ ಒದಗುವ ಸಂದೇಶ. ದೈವೀ ಪ್ರೇರಣೆಯ ಸತ್ಯ ಬೋಧೆ. ಆ ಸತ್ಯದಲ್ಲಿದ್ದು ಮಾನವನ ಜೀವನಕ್ಕೆ ಬೇಕಾದ ಅನುಭವ ವಿಚಾರಗಳನ್ನು ಕವಿ ಕೊಡುತ್ತಲಿರುವನು. ವಿಜ್ಞಾನಿ ಪ್ರಕೃತಿಯ ವಸ್ತುಗಳನ್ನು ಘನ, ಗಾತ್ರಗಳಿಂದ ಅಂಕಿಸಿ ಅದರ ಬಣ್ಣ ರಾಸಾಯನಿಕ ಬದಲಾವಣೆ ಕಡೆ ಹೋಗಿಬಿಡುತ್ತಾನೆ. ರಾಸಾಯನಿಕ ಪರಿವರ್ತನೆಯ ಶೋಧ ನಡೆದು ಅದರ ಉಪಯೋಗದ ಕಡೆಗೆ ವಿಜ್ಞಾನಿಯ ಗಮನ. ವಿಜ್ಞಾನಿ ಮಾಡುವ ಶೋಧೆ ಪ್ರಕೃತಿಯ ವಸ್ತುಗಳ ಮೇಲಿದ್ದರೂ ಅವನ್ನು ಬದಲಾಯಿಸಿ ಉಪಯೋಗಕ್ಕೆ ಬಳಸಿಕೊಳ್ಳುತ್ತಾನೆ. ಈ ಎರಡು ಮಾನವನ ಜೀವನದಲ್ಲಿ ಅನುನಿತ್ಯ ನಡೆಯುತ್ತಲಿವೆ. ಪ್ರಕೃತಿಯ ತರಕಾರಿಯ ಸೃಷ್ಟಿ ಒಂದೆಡೆ ನಡೆಯುತ್ತದೆ. ಅದನ್ನು ಬೇಯಿಸುವ ಕೆಲಸ ಇನ್ನೊಂದೆಡೆ ನಡೆಯುತ್ತದೆ. ಕವಿ ವಸ್ತುಗಳ ಪ್ರಕೃತಿಯ ಸಂಪರ್ಕವನ್ನೇ ಆಶಿಸುತ್ತಾನೆ. ವಿಜ್ಞಾನಿಯ ಶೋಧೆಯಲ್ಲಿ ರಾಸಾಯನಿಕ ಬದಲಾವಣೆಯೇ ಮುಖ್ಯಾಂಶ. ಕವಿಯಿಂದ ಮಾಡಿಕೊಡಲಾಗುವ ಜೀವನ ಕರ್ತವ್ಯಜ್ಞಾನ ಸುಲಭ. ವಿಜ್ಞಾನಿಯಿಂದ ಮಾಡಿಕೊಡಲಾಗುವ ಜ್ಞಾನ ಮಾರ್ಗ ಸುಲಭಸಾಧ್ಯವಲ್ಲ. ಎರಡೂ ಜೀವನಕ್ಕೆ ಬೇಕಿವೆ. ಜೀವನದ ಉನ್ನತಿಯ ದಶೆ ಕಾಣಲು ಕವಿ ವಿಜ್ಞಾನಿಗಳೀರ್ವರ ಅಗತ್ಯವಿದೆ. ಕಾಳಿದಾಸನು ಭೂಗೋಲವಿಜ್ಞಾನವನ್ನು ಪಡೆದಿರುವನು. ಇದರಿಂದ ಆತನು ತನ್ನ ಗ್ರಂಥದಲ್ಲಿ "ಛಾಯಾಹಿ ಭೂಮೇಃ" ಎಂದು ಗ್ರಹಣ ವಿಚಾರವಾಗಿ ಹೇಳಿರುವನು.

> ಭರ್ತುಃ ಪ್ರಣಾಶಾದಥ ಶೋಚನೀಯಾಂ ದಶಾಂತರಂ ತತ್ರ ಸಮಂ ಪ್ರಪನ್ನೇ ।
> ಅಪಶ್ಯತಾಂ ದಾಶರಥೀ ಜನನ್ಯೌ ಛೇದಾದಿವೋಪಘ್ನತರೋರ್ವ್ರತತ್ಯೌ ॥
>
> (ರಘುವಂಶ)

ರಾಮಲಕ್ಷ್ಮಣರು ಭರ್ತೃನಾಶವನ್ನುಗೊಂಡು ಶೋಚನೀಯಾವಸ್ಥೆಯನ್ನು ಪಡೆದ ತಾಯಂದಿರನ್ನು, ಆಶ್ರಯಿಸಿದ್ದ ಮರ ಕಡಿದು ಹೋಗಿ ನೆಲಕ್ಕುರುಳಿರುವ ಲತೆಗಳಂತೆ ಕಂಡರೆಂದು ಕಾಳಿದಾಸನು ರಘುವಂಶದಲ್ಲಿ ಹೇಳುತ್ತಾನೆ. ಪತಿಶೋಕವನ್ನು ಹೊಂದಿದ ವಿಧವೆಯರ ಜೀವನ ಆಶ್ರಯದಾತರು ನಾಶಗೊಂಡ ಲತೆಯ ಜೀವನ. ವಿಧುರೆಯು ಜೀವನದಿಂದ ಇಂತಿದ್ದು ಶೋಚನೀಯಾವಸ್ಥೆಯನ್ನು ಹೊಂದಿರುತ್ತಾಳೆ.

ತಯಾ ದುಹಿತ್ರಾ ಸುತರಾಂ ಸವಿತ್ರೀ ಸ್ಫುರತ್ಪ್ರಭಾಮಂಡಲಯಾಚಕಾಸೇ ।
ವಿದೂರಭೂಮಿರ್ನವ ಮೇಘ ಶಬ್ದಾದುದ್ಭಿನ್ನಯಾ ರತ್ನ ಶಲಾಕಯೇವ ॥
(ಕು. ಸಂ.)

ಮೇನೆಯು ಪರ್ವತರಾಜನನ್ನು ಮದುವೆಯಾದಳು. ಕಾಲಕ್ರಮದಿಂದ ಮನಸ್ಸನ್ನು ಸೆಳೆವ ಯೌವನವನ್ನು ವಹಿಸಿದ ಮೇನೆಯ ದಾಂಪತ್ಯದಲ್ಲಿ ಸುಸಿಲ್ಪಡೆದು ಗರ್ಭಧಾರಣೆಯಾಯಿತು. ಮೊದಲು ಸಮುದ್ರದೊಡನೆ ಗೆಳೆತನ ಬಳೆಸಿದ ಮೈನಾಕನ ಹುಟ್ಟಾಯಿತು. ಆ ಬಳಿಕ ಪಾರ್ವತಿಯು ಜನನವಾಯಿತು. "ಪ್ರಭಾ ಮಂಡಲದಿಂದ ಕೂಡಿದವಳಾದ ಪಾರ್ವತಿಯಿಂದ ಮೇನೆಯು ದೂರದ ಮೇಘದ ಘರ್ಜನೆಯಿಂದ ಭೂಮಿಯು ಒಡೆದು ತೋರಿದ ರತ್ನಾಂಕುರದಂತೆ ಆದಳು" ಎಂದು ಕಾಳಿದಾಸನು ಕುಮಾರ ಸಂಭವದಲ್ಲಿ ಹೇಳುತ್ತಾನೆ. ರತ್ನದ ಹೋಲಿಕೆ ಪಾರ್ವತಿಗೆ ಕೊಡಲಾಗಿದೆ. ಕನ್ನೆಯು ಕಳಂಕ ರಹಿತವಾದ ರತ್ನದಂತೆ. ಎಷ್ಟು ನಾರಿಯು ಕಳಂಕ ರಹಿತಳಾಗಿರುವಳೋ ಅಷ್ಟು ಆಕೆಗೆ ಮಹತ್ವ. ರತ್ನವು ಎಷ್ಟು ಕಳಂಕರಹಿತವಾಗುತ್ತದೋ ಅಷ್ಟು ಆ ರತ್ನಕ್ಕೆ ಬೆಲೆ ಹೆಚ್ಚುತ್ತದೆ. ಪಾರ್ವತಿಯು ಪ್ರಭಾ ಮಂಡಲದಿಂದ ಕೂಡಿದ ರತ್ನದಂತಿದ್ದಳು. ಆ ರತ್ನದ ಹುಟ್ಟು ಮೇನೆಯಲ್ಲಾಯಿತು. ಮೋಡದ ಗರ್ಜನೆಯಿಂದ ಭೂಮಿಯೊಡೆದು ರತ್ನದ ಹುಟ್ಟಾಗುವುದೆಂದು ಕವಿ ಸಮಯ ಹೇಳುತ್ತಿರುವುದು. ಕವಿ ಸಮಯದಂತೆ ಇಲ್ಲಿ ಬಣ್ಣಿಸಿರುವನಾದರೂ ಗಗನದಲ್ಲಿ ಸಂಚರಿಸುವ ಮೋಡಗಳಿಗೆ ಆವುದು ಕಾರಣವಾಗುತ್ತದೆ? ಅವುಗಳ ಹುಟ್ಟೆಲ್ಲಿಂದ? ಎಂಬುದನ್ನು ಆಲೋಚನೆಗೊಂಡರೆ ಪಾರ್ವತಿಯ ಮುಜ್ಜನ್ಮ ಅದಾಗಣ ನೆಲೆ ದೇವತೆಗಳ ಕಠಿಣ ಪರಿಸ್ಥಿತಿ ಎಲ್ಲಾ ಭಾಸವಾಗುವುವು. ಮೇಘೋದಯಕ್ಕೆ ಗ್ರೀಷ್ಮ ಸಂತಾಪ ಕಾರಣ. ಮೇಘವಾದ ಬಳಿಕ ಅವುಗಳ ಸಂಘಟನೆ ಗಾಳಿಯಿಂದ ಸಿದ್ಧಿಸುವುದು. ಇದರಿಂದ ಭೂಮಿಯ ಗರ್ಭ ಒಡೆದು ರತ್ನ ಶಲಾಕೆಯ ದರ್ಶನವಾಗುತ್ತಿರುವುದು. ಭೂಮಿಯ ನೆಲೆ ಮೇನೆಯದು. ಈ ಚೆಲುಗುವರಿ ರತ್ನದಂತೆ ಕವಿಯಿಂದ ಕಾಣಲಾಗಿದೆ. ಕವಿ ಇಲ್ಲಿ ಕೊಟ್ಟಿರುವ ಉಪಮೆ ನಾರೀಮಣಿಯರ ಜೀವನದ ಬೆಲೆಯನ್ನು ಅಂಕಿಸುವ ಪಾವಿತ್ರ್ಯ. ಇದರಿಂದಲೇ ತಾಯಿ ಶೋಭೆಗೊಳ್ಳುತ್ತಾಳೆ. ಮಗಳ ಪಾವಿತ್ರ್ಯ ಜೀವನ ತಾಯಿಯ ಜೀವನವನ್ನು ಬೆಳಕುಗೊಳಿಸಲು ಸಾಧಕ ಸಾಮಗ್ರಿ. ಹೆಮ್ಮಕ್ಕಳು ಪಾವಿತ್ರ್ಯ ಜೀವನ ತುಂಬಿದಷ್ಟು ಮಾತೆಯರ ಕೀರ್ತಿ ಪ್ರಭೆಹೆಚ್ಚುತ್ತದೆ. ತವರ ಹೆಸರು ಉನ್ನತಿಗೆ ಬರುತ್ತದೆ. ಇದನ್ನು ಸಾಧಿಸುವುದು ಕನ್ನೆಯರ ಮುಖ್ಯಕರ್ತವ್ಯವಿದೆ.

ಕಾಮನು ದೇವತೆಗಳ ಕೆಲಸಕ್ಕಾಗಿ ಹೊರಟನು. ಈ ಸಾಧನೆಯಲ್ಲಿ ಆತನ ದೇಹವು ಮುಕ್ಕಣ್ಣನ ಕಣ್ಣುರಿಯ ಪಾಲಾಯಿತು. ಭಸ್ಮಾವಶೇಷವಾದ ಪುರುಷಾಕೃತಿ ನೆಲದಲ್ಲುಳಿಯಿತು. ಈ ಸಮಯದಲ್ಲಿ ರತಿಯು ಮೈಮರೆತಿದ್ದು ಅಲ್ಪ ಸಮಯಾನಂತರ ಎಚ್ಚತ್ತು ನಾಲ್ದೆಸೆಗೆ ಕಣ್ಣೆರಚಿದಳು. ಆಕೆಯ ಕಣ್ಣಿಗೆ ಶಿವನ ಕೋಪಾನಲದ ಭಸ್ಮ ಮಾತ್ರ ಕಂಡಿತು. ಕೂಡಲೇ ಆಕೆ ನೆಲಕ್ಕೊರಗಿದಳು. ಆಕೆಯ ಉಡಿಗೆ ತೊಡಿಗೆ ಕೇಶರಾಶಿ ಎಲ್ಲಾ ನೆಲದಲ್ಲಿ ಹಬ್ಬಿದುವು. ಶಿವನು ತಪಸ್ಸನ್ನು ಮಾಡುತಿದ್ದ ವನಭೂಮಿಯನ್ನು ತನ್ನ ಶೋಕದಲ್ಲಿ ಪಾಲುಗೊಳ್ಳುವಂತೆ ಮಾಡಿದಳು. ಆಗ ರತಿಯು

ಕ್ವನು ಮಾಂ ತ್ವದಧೀನ ಜೀವಿತಾಂ ವಿನಿಕೀರ್ಯ ಕ್ಷಣ ಭಿನ್ನ ಸೌಹೃದ: ।
ನಲಿನೀಂ ಕ್ಷತ ಸೇತು ಬಂಧನೋ ಜಲಸಂಘತ ಇವಾಸಿ ವಿದ್ರುತ: ॥

(ಕು. ಸಂ. ಚ. ಸ. ನು. ೬)

ಎಂದು ಮನ್ಮಥನಿಗೆ ನುಡಿಯುವಳು. ಎಲೆನಲ್ಲ; ಒಡೆದು ಹೋದ ಕಟ್ಟದ ನೀರಿನ ನಳಿನದಂತೆ ನಿನ್ನನ್ನೇ ಹೊಂದಿ ಬಾಳಿರುವ ನನ್ನನ್ನು ಎತ್ತ ಒಗೆದು ಕ್ಷಣದಲ್ಲಿ ಗೆಳೆತನ ಬಿಟ್ಟು ಓಡಿರುವೆ? ಎಂದು ಮನ್ಮಥನನ್ನು ಕೇಳುವಳು. ಕಟ್ಟಒಡೆದ ನಲಿನದ ನೆಲೆ ರತಿಯದು, ನೀರಿನಂತೆ ಮನ್ಮಥನು ಓಡಿರುವನು. ನೀರಿನ ಆಶ್ರಯ ನಲ್ಲೆಗೆ. ನಳಿನಕ್ಕೆ ನೀರಿನಾಶ್ರಯ. ನೀರು ಇಲ್ಲದಿದ್ದರೆ ಕಮಲದ ಪಾಡೇನು? ಕೆರೆಯ ದಂಡೆ ಹೋದರೆ ಅದರೊಳಗಿನ ಕಮಲಗಳು ಬಾಡುವವು. ಅಂತೆಯೇ ನೆಲದಲ್ಲಿ ಹೊರಳುತಿದ್ದ ರತಿಯ ನೆಲೆ ಕವಿಯ ಕಣ್ಣಿಗೆ ತೋರಿಬಂದಿತು. ಕವಿಯು ಪ್ರಕೃತಿಯ ನಿಸರ್ಗ ಚಿತ್ರವನ್ನು ಇಲ್ಲಿ ಕಾಣಿಸಿರುವನು. ಕಾವ್ಯದ ಮಾಧುರ್ಯವು ಪ್ರಕೃತಿಯ ನಿಸರ್ಗತೆಯನ್ನು ತುಂಬಿದಷ್ಟು ರುಚಿರವೆನಿಸುವುದು; ನಿಸರ್ಗ ಸೌಂದರ್ಯ ಚಿತ್ರಣ ಉಪಮಾಲಂಕಾರದ ಮೇಲ್ಮೆಗೆ. ಪ್ರಕೃತಿಯ ಸಹಜತೆ ಅಲಂಕಾರಕ್ಕೆ ಬರಬೇಕಾದರೆ ಪ್ರಕೃತಿಯ ಸತ್ಯವೇನೆಂದು ತಿಳಿದಿರಬೇಕು. ಕಾಳಿದಾಸನು ಪ್ರಕೃತಿಯ ನಿಸರ್ಗ ಚಿತ್ರವನ್ನೂ ಸತ್ಯವನ್ನೂ ಕಾವ್ಯದಲ್ಲಿ ತುಂಬಿರುತ್ತಾನೆ. ಇಂತಹ ಮಾಧುರ್ಯ ಪೂರ್ಣ ಉಪಮಾನಗಳನ್ನೇ ಅಧಿಕವಾಗಿ ಆಯ್ದಿರುತ್ತಾನೆ. ಅಕ್ಷರಶಃ ಆತನ ಉಪಮೆಗಳೆಲ್ಲಾ ಪ್ರಕೃತಿಯನ್ನು ಬಿಟ್ಟಿಲ್ಲ.

ರತಿಯು ಕಾಮನ ಅಗಲಿನಿಂದ ಬಹಳ ನೊಂದಳು. ನೊಂದ ಆಕೆ ಅವನ ಗೆಳೆಯನಾದ ವಸಂತನನ್ನು ಕೂಗಿ ಕರೆದು ಹೇಳ ತೊಡಗಿದಳು.

ಗತ ಏವನತೇ ನಿವರ್ತತೇ ಸಸಖಾ ದೀಪ ಇವಾನಿಲಾ ಹತಃ।
ಅಹಮಸ್ಯ ದಶೇವ ಪಶ್ಯಮಾಮವಿಷಹ್ಯ ವ್ಯಸನೇನ ಧೂಮಿತಾಂ ॥
(ಕು. ಸಂ. ಚ. ಸ. ಪಿ. ೩೦)

"ಎಲೆವಸಂತ; ನಿನ್ನ ಆ ಸಖನೆಲ್ಲಿ? ಗಾಳಿಯಿಂದ ನಂದಿಸಿದ ದೀಪದಂತೆ ಹೋದ ಆತನು ಹಿಂದಿರುಗುವುದಿಲ್ಲ. ನಾನು ಬೆಳಕಿನ ಬತ್ತಿಯಂತಿರುವೆನು. ಸಹಿಸಲಾರದ ದುಃಖದಿಂದ ಹೊಗೆಗೊಂಡ ನನ್ನನ್ನು ನೋಡು. ಕವಿ ಕಾಳಿದಾಸನು ಪ್ರಕೃತಿಯ ಅತಿ ಉತ್ತಮವಾದ ಉದಾಹರಣೆಯನ್ನು ರತಿಯ ಸ್ಥಿತಿಗೆ ಕೊಟ್ಟಿರುವನು. ಕಾಮನು ಮಡಿದನು. ಪತಿಯು ಇಲ್ಲದ ಸ್ತ್ರೀಯ ಬಾಳುವೆಯ ಸಂಪೂರ್ಣಚಿತ್ರ ಕಾಳಿದಾಸನ ಮೇಲಿನ ಉಪಮೆಯಲ್ಲಿದೆ. ಉರಿಸಿಟ್ಟ ಬೆಳಕು ಗಾಳಿಯಿಂದ ಆರಿ ಹೋದರೆ ಕಾಣುವ ನೆಲೆ ವಿಧವೆ ಹೆಣ್ಣಿನದು. ಹೋದ ಬೆಳಕು ಮತ್ತೆ ಕಾಣದು. ಉರಿದ ಬತ್ತಿ ಹೊಗೆ ಕಾರುತ್ತಿರುವುದು. ವ್ಯಸನದಿಂದ ತುಂಬಿದ ವಿಧವೆಯ ಜೀವನ ಹೊಗೆ ಕಾರುತ್ತಿರುವ ಬತ್ತಿಯ ನೆಲೆ. ಬತ್ತಿ ಸುಟ್ಟಿರುತ್ತದೆ. ಬತ್ತಿಯು ಬೆಳಕುರಿಯುತ್ತಿದ್ದರೆ ಉಪಯೋಗಾರ್ಹ. ಅನ್ಯಥಾ ಬೇಡ. ಉರಿಸಿದ ಬತ್ತಿಯನ್ನು ಕಾಂಬವರಾದರೂ ಇರುವರೇ? ಇಲ್ಲಿನ ಕಾಳಿದಾಸನ ಉಪಮೆ ಅತಿ ಹೃದ್ಯ ಮತ್ತು ಸಮಾಚೀನ.

ಕಾಮನ ಮಡದಿ ಸಹಗಮನ ಮಾಡಲು ಸನ್ನದ್ಧಳಾದಳು. ವಸಂತನನ್ನು ಬೆರಿಸಿ ಚಿತೆಯ ರಚನೆಗೆಯ್ಸಿದಳು. ದೇಹ ವಿಮುಕ್ತಿಗೆ ಅಣಿಯಾದಳು. ಆಗ ಆಕೆಗೆ ಆಕಾಶವಾಣಿಯು ಕೇಳಿಸಿತು. ಆ ನುಡಿ ಹೇಗಾಯಿತೆಂದು ಕಾಳಿದಾಸನು ಕುಮಾರಸಂಭವದಲ್ಲಿ ಹೇಳುತ್ತಿರುವನು.

ಇತಿ ದೇಹವಿಮುಕ್ತಯೇ ಸ್ಥಿತಾಂ ರತಿಮಾಕಾಶಭವಾ ಸರಸ್ವತೀ।
ಶಫರೀಂ ಹ್ರದ ಶೋಶ ವಿಕ್ಲವಾಂ ಪ್ರಥಮಾವೃಷ್ಟಿ ರಿವಾನ್ವಕಂಪಯತ್॥

"ದೇಹ ವಿಮುಕ್ತಿಗೆ ತಯಾರಾಗಿ ನಿಂತಿರುವ ರತಿಗೆ ಆಕಾಶವಾಣಿಯು ಒಣಗಿದ ಬೆಳೆಯ ಭೂಮಿಗೆ ಮೊದಲು ಕರೆದ ಮಳೆಯಂತೆನಿಸಿತು." ಎಂದು ಕಾಳಿದಾಸನು ಬಣ್ಣಿಸುವನು. ಬೆಳೆದ ಭೂಮಿಗೆ ಮೊದಲಮಳೆ ಹನಿವಂತಾದ ನೆಲೆ ರತಿಗೆ ಆ ಆಕಾಶವಾಣಿಯಿಂದಾಯಿತು. ಆಕೆಯ ನಲ್ಲನು ಪಾರ್ವತಿಯ ಪರಿಣಯವು ಶಿವನಿಗಾದೊಡನೆ ಕಾಣಬರುವನೆಂದು ನುಡಿದ ಆ ನುಡಿ ಮೊದಲ ಮಳೆಯಂತಹದು. ಗದ್ದೆ ಮಳೆಬಾರದೆ ಒಣಗಿರುತ್ತದೆ. ಅದರ ಕಳೆ ಕಾಣಬೇಕಾದರೆ ಮಳೆಬೀಳಬೇಕು. ಮಳೆಬಂದ ಬಳಿಕ ಬಿತ್ತಿದ ಬೀಜಗಳು ಚಿಗುರೊಡೆವವು. ಚಿಗುರೊಡೆದು ಹಚ್ಚನಾಗಿ ಕಾಂಬ ಬಯಲು ಕಣ್ಣಿಗೆಹಿತ.

ಮತ್ತು ಬೇರೆಯುವರ ಮನಸ್ಸನ್ನು ಅನುಕಂಪೆಗೆ ಈಡಾಗಿಸುವುದು. ಒಣಗಿದ ಗದ್ದೆ ಒಣಗಿದ ಬೆಳೆಯು ಬೆಳಸುಭೂಮಿ ಕಾಮನ ರಾಣಿ. ಕಾಮನ ರಾಣಿ ಜನರ ಮನಸ್ಸನ್ನು ಮೋಹಿಸುವಂತೆ ಮಾಡುವವಳು. ಆಕೆ ಅಂತಹ ಮಾಟಗಾರ್ತಿ. ಬೆಡಗಿನ ಕಣೆ, ಸಿಂಗಾರದ ಹೊನಲು. ಹಚ್ಚಗಾದ ಬೆಳಸುಭೂಮಿ ಜನತೆಯು ಸಿಂಗಾರ ವೈಭವ ಸುಖಗಳಿಗೆ ತವರುಮನೆ. ಇದರಿಂದಲೇ ಜನತೆಗೊದಗುವುದು ಸುಗ್ಗಿಯ ಉಪಭೋಗ ಸಾಧನ. ಇಂತಹ ವಿಚಾರವನ್ನು ಪ್ರಕೃತಿಯೊಡನೆ ಬಳಸಿ ಉಪಮೆಯನ್ನು ಚಿತ್ರಿಸಿರುತ್ತಾನೆ. ಪರ್ವತರಾಜನಲ್ಲಿ ಹುಟ್ಟಿದ ಮಗು ಪಾರ್ವತಿ. ಆ ಹೆಣ್ಣು ಮಗುವಿನಿಂದ ಪರ್ವತರಾಜನು ಏನಾದನೆಂಬುದನ್ನು ಕಾಳಿದಾಸನು ಹೇಳುತ್ತಿರುವನು.

ಪ್ರಭಾಮಹಾತ್ಯ್ಯಶಿಖಯೇವ ದೀಪ ಸ್ತ್ರಿಮಾರ್ಗ ಯೇವತ್ರಿದಿವಸ್ಯ ಮಾರ್ಗಃ ।
ಸಂಸ್ಕಾರ ವತ್ಯೇವ ಗಿರಾ ಮನೀಷೀತ ತಯಾಸಪೂತಶ್ಚ ವಿಭೂಷಿತಶ್ಚ ॥
(ಕು. ಸಂ. ಪ್ರ. ಸ. ಪ. ೨೮)

"ತುಂಬಿದ ಪ್ರಭೆಯಿಂದ ದೀಪದ ಬೆಳಕಂತೆಯೂ, ಗಂಗೆಯಿಂದ ಸ್ವರ್ಗದ ಮಾರ್ಗದಂತೆಯೂ, ಸಂಸ್ಕಾರದಿಂದ ಕೂಡಿದ ನುಡಿಯಿಂದ ವಿದ್ವಾಂಸನಂತೆಯೂ, ಪಾರ್ವತಿಯಿಂದ ಹಿಮರಾಜನು ಪವಿತ್ರನೂ ಅಲಂಕೃತನೂ ಆದನು." ಎಂದು ಕಾಳಿದಾಸನು ನುಡಿಯುವನು. ಮೊದಲು ತುಂಬಿದ ಪ್ರಭೆಗೂಡಿದ ಬೆಳಕಿಗೆ ಹೋಲಿಸುವನು. ಎರಡನೆಯದಾಗಿ ಗಂಗೆಯ ಹೊನಲಿಂದ ಸ್ವರ್ಗಮಾರ್ಗ ಶುಚಿಗೊಂಡಂತೆ ವಿಭೂಷಿತನಾದನೆನ್ನುವನು. ಸಂಸ್ಕಾರಯುಕ್ತವಾದ ನುಡಿಯಿಂದ ವಿದ್ವಾಂಸನಂತೆ ಪವಿತ್ರನಾದನು" ಎಂದು ಮೂರು ಉಪಮೆಗಳಿವೆ. ಕವಿಯು ಮೊದಲ ಎರಡು ಉಪಮೆಗಳಿಂದ ಸಮಾಧಾನಗೊಳ್ಳಲಿಲ್ಲ. ಅದಲ್ಲದೆ ಒಂದೊಂದು ಉಪಮೆಗಳೂ ವಿಶೇಷ ಶಕ್ತಿಯುವು. ಬೆಳಕಿನಪ್ರಭೆ ಕಣ್ಣಿರುವ ಮಂದಿಗಳಿಗೆ ಮಾತ್ರ ತಿಳಿಯಬರುವುದು. ಗಂಗೆಯ ಹೊನಲಿಂದ ಸ್ವರ್ಗ ಮಾರ್ಗದಂತೆ ಎಂಬಲ್ಲಿ ಆ ನದಿಯ ಪಾವನ ಶಕ್ತಿಯನ್ನು ಹೇಳಲಾಗಿದೆ. ಆದರೆ ಗಂಗೆಯನ್ನು ಹೊಂದುವರಾದರೂ ಯಾರು? ಶಿಕ್ಷಿತ ವಿದ್ವಾಂಸನು ಸಂಸ್ಕಾರಯುಕ್ತವಾಗಿ ನುಡಿಯುವನು. ನುಡಿಯಿಂದ ಜನರನ್ನು ಪವಿತ್ರಗೊಳಿಸುವನು. ಭಾವನೆಯನ್ನು ಶುದ್ಧಗೊಳಿಸುವನು. ಮತ್ತು ಆ ನುಡಿಯಿಂದ ಅಲಂಕಾರವೂ ಉಂಟಾಗುವುದು. ವಿದ್ವಾಂಸನಿಗೆ ಇದರಿಂದ ಮನ್ನಣೆಯಾಗುತ್ತದೆ. ಅಂತೆಯೇ ಈ ಪಾರ್ವತಿಯ ಮೂಲಕ ಪರ್ವತ

ರಾಜನು ಮನ್ನಣೆಗೆ ಭಾಜನನಾದನು ಎಂದು ಹೇಳುವ ಈ ನುಡಿ ಹೃದ್ಯವಾಗಿದೆ. ಉಪಮೆಯು ಸವಿಯಿಂದ ಕೂಡಿದ್ದು ಇನಿದಾಗಿದೆ.

ಇಂದ್ರನ ಸಭೆಯಿಂದ ಸಂಸ್ಕೃತನಾದ ದುಷ್ಯಂತನು ಮಾರೀಚನ ಆಶ್ರಮದ ಬಳಿಗೆ ಬಂದನು. ಮಾರೀಚನು ಮಹಾ ಮುನಿ. ಅವನನ್ನು ಸಂದರ್ಶಿಸಿ ಹೋಗಲುಳ್ಳ ಅಭಿಲಾಷೆ ದುಷ್ಯಂತನಿಗುಂಟಾಯಿತು. ಮಾತಲಿಯು ಮುನಿಯ ಸಮಯವನ್ನು ಕೇಳುವರೆ ಹೋದನು. ರಾಜನಾದ ದುಷ್ಯಂತನು ಅಶೋಕ ವೃಕ್ಷದ ಬುಡದಲ್ಲಿ ಮಾತಲಿಯ ಆಗಮನವನ್ನು ನಿರೀಕ್ಷಿಸುತ್ತ ನಿಂತನು. ಆ ಹೊತ್ತಿನಲ್ಲಿ ತಾಯ ಮೊಲೆಹಾಲನ್ನು ಪೂರ್ಣವಾಗಿ ಕುಡಿಯದ ಸಿಂಹಶಿಶುವನ್ನು ಆಡಲೋಸುಗ ಕೇಸರವನ್ನು ಹಿಡಿದು ಬಲಾತ್ಕಾರವಾಗಿ ಸೆಳೆವ ಬಾಲಕನೊಬ್ಬನನ್ನು ದುಷ್ಯಂತನು ಕಂಡನು. ಅದಲ್ಲದೆ ಸಿಂಹಶಿಶುವಿನೊಡನೆ ಎಲೆ! ಸಿಂಹವೇ ಬಾಯನ್ನು ಒಡೆ. ನಿನ್ನ ಹಲ್ಲನ್ನು ಲೆಕ್ಕಮಾಡುವೆಯೆಂಬ ಬಾಲಕನ ನುಡಿಗಳನ್ನೂ ಕೇಳಿದನು. ಆಶ್ರಮದಲ್ಲಿದ್ದ ತಾಪಸೆಯರು ಸರ್ವದಮನ ಎಂಬ ನಾಮಕರಣವು ನಿನಗೆ ಅನ್ವರ್ಥವಾಗಿಯೇ ಆಯಿತು ಎಂದು ಆ ಹುಡುಗನನ್ನು ಹೇಳತೊಡಗಿದರು. ದುಷ್ಯಂತನ ಹೃದಯವು ಆ ಮಗುವನ್ನು ಕಾಣುತ್ತಲೇ ಸ್ವೋದರ ಪುತ್ರಸ್ನೇಹವನ್ನು ತಳೆಯತೊಡಗಿತು. ಮಕ್ಕಳ ಚಿಂತೆಗೂಡಿದ ಆತನ ಮನಸ್ಸು ಅದಕ್ಕೆ ಕಾರಣವಾಗಿರಬಹುದು ಎಂದು ತನ್ನಲ್ಲೇ ಶಾಂತಿಗೊಂಡನು. ತಾಪಸೆಯರು ಸಿಂಹ ಶಿಶುವನ್ನು ಬಿಡದೆ ಇದ್ದರೆ ನಿನ್ನ ತಲೆಯ ಮೇಲೆ ಅದರ ತಾಯಿ ಹೆಣ್ಣು ಸಿಂಹ ಬೀಳುವುದೆಂದು ಸರ್ವದಮನನಿಗೆಂದು ಹೆದರಿಕೆಯನ್ನು ಹುಟ್ಟಿಸಿದರು. ಅದಕ್ಕೆ ಸರ್ವದಮನನು ನಗುತ್ತಾ ಅಬ್ಬಾ! ತುಂಬಾ ಹೆದರಿದೆಯೆಂದು ಹೇಳಿದನು. ಆಗ ಕಾಳಿದಾಸನು ಸರ್ವದಮನನ ವಿಷಯದಲ್ಲಿ ದುಷ್ಯಂತನ ಬಾಯಿಯಿಂದ ಈ ರೀತಿಯಿಂದ ಹೇಳುತ್ತಿರುವನು.

ಮಹತಸ್ತೇಜಸೋ ಬೀಜಂ ಬಾಲೋಽಯಂ ಪ್ರತಿಭಾತಿ ಮೇ ।
ಸ್ಫುಲಿಂಗಾವಸ್ಥಯಾ ವಹ್ನಿರೇಧಾಪೇಕ್ಷ ಇವಸ್ಥಿತಃ ॥

'ಈ ಹುಡುಗನನ್ನು ನೋಡಿದಾಗ ನನಗೆ ಮಹಾ ತೇಜಸ್ಸಿನ ಬೀಜರೂಪವಾಗಿ ಕಾಣುತ್ತಾನೆ. ಕಟ್ಟಿಗೆಯ ರಾಶಿಯನ್ನು ಅಪೇಕ್ಷಿಸುವ ಕಣಾವಸ್ಥೆಯ ಅಗ್ನಿಯಂತೆ ಈತನಿದ್ದಾನೆ.' ಎಂದು ಉಪಮೆಯನ್ನು ಕಾಳಿದಾಸನು ಕೊಡುತ್ತಿರುವನು. ಕಣಾವಸ್ಥೆಯ ಬೆಂಕಿಗೆ ಕಟ್ಟಿಗೆ ಕೂಡಿಸಿದರೆ ಅದು ಜಾಜ್ವಲ್ಯ

ಮಾನವಾಗುವುದು. ಅಂತೆಯೇ ಈ ಹುಡುಗನು ವಾತಾವರಣದ ಅನುಕೂಲತೆಯನ್ನು ಪಡೆದರೆ ಮಹಾ ತೇಜೋವಂತನಾಗಿ ಬೆಳಗುವನು ಎಂದೇ ದುಷ್ಯಂತನು ಹೇಳುವನು. ಸರ್ವದಮನನೇ ಮುಂದೆ ಭರತನೆನಿಸಿ ದನು. ಕಣಾವಸ್ಥೆಯ ಬೆಂಕಿಯಂತಿದ್ದ ಭರತನು ರಾಜಕುಲದಲ್ಲಿ ಬಳೆದು ಭಾರತವೆಂದು ನಾಮಕರಣವನ್ನು ಈ ಖಂಡಕ್ಕೆ ಬರುವಂತೆ ಮಾಡಿದನು. ಈ ತೇಜೋಬೀಜವು ಜಂಬೂದ್ವೀಪವನ್ನು ತನ್ನ ಹೆಸರಿನಿಂದ .ಆಚಂದ್ರಾರ್ಕವಾಗಿ ಬೆಳಗುವಂತೆ ಮಾಡಿತು. ಕಾಳಿದಾಸನು ಇಲ್ಲಿ ಭರತನ ಬಾಲ್ಯವನ್ನು ಚಿತ್ರಿಸು ವಲ್ಲಿ ಅಗ್ನಿಕಣ ಸಾದೃಶ್ಯವನ್ನು ಕಂಡಿರುವನು. ಕವಿಯು ಉಪಮೆಯನ್ನು ಕಲ್ಪಿಸುವಲ್ಲಿ ಉನ್ನತ ಹೃದಯವನ್ನು ತೋರಿರುವನು.

ಕವಿಗಳು ಬಳಸಿರುವ ಉಪಮೆಗಳಿಂದ ಅವರ ಹೃದಯದ ಮಟ್ಟವನ್ನು ಕಂಡುಕೊಳ್ಳಬಹುದಾಗಿದೆ. ಅಂತೆಯೇ ಕವಿಗಳ ಗ್ರಂಥದಿಂದಲೂ ಕವಿಗಳ ವಿಶಾಲ ಹೃದಯವನ್ನು ಕಾಣಬಹುದಾಗಿದೆ. ಕವಿ ಎಷ್ಟು ಉನ್ನತ ಮನಸ್ಸಿ ನವನಿರುವನೋ ಅಷ್ಟು ಉನ್ನತ ಭಾವನೆಗಳು ಕಾವ್ಯದಲ್ಲಿ ತೋರಿಬರುವವು. ಇಂದಣ ಕವಿಗಳಲ್ಲಿ ಲೇಖಕರಲ್ಲಿ ಆ ಉನ್ನತ ಹೃದಯವು ಕಡಮೆಯಾಗಿ ಸಮಾಜದಲ್ಲಿ ಒಡಕುಗಳು ಹೆಚ್ಚಿವೆ. ಕವಿಯು ಕಾವ್ಯ ಸಮಾಜದಲ್ಲಿ ಒಡ ಕನ್ನು ತರುವುದಕ್ಕಲ್ಲ. ಪ್ರೇಮಬಂಧದಿಂದ ಜಗತ್ತನ್ನು ಕಟ್ಟುವುದಕ್ಕೆ. ಇದರಿಂದಲೇ ಕಾವ್ಯ 'ಕಾಂತಾ ಸಂಮಿತಿ'ಯ ಉಪದೇಶಕ್ಕುಳ್ಳದ್ದೆಂದು ಲಾಕ್ಷ ಣಿಕರು ಹೇಳಿರುವರು. ಕಾಳಿದಾಸನ ಹೃದಯ ಉನ್ನತ ವಿಶಾಲ. ಈ ಹೃದಯದ ಮಹತ್ವದಿಂದ ಕವಿಸಮ್ರಾಟನೆನಿಸಿದ್ದಾನೆ. ಅಪ್ರತಿಮವಾದ ಸುಂದರ ಶಾಕುಂತಳಾ ನಾಟಕವನ್ನು ಸೃಷ್ಟಿಸಿದ್ದಾನೆ. ಈ ಸೃಷ್ಟಿ ಆದ್ದರಿಂ ದಲೇ ಸ್ವರ್ಗಮಾಧುರ್ಯ ಪೂರ್ಣವಾಗಿದೆ.

"ಎಲೆ! ಮಗು ಬಾಲ ಮೃಗೇಂದ್ರನನ್ನು ಬಿಡು. ನಿನಗೆ ಬೇರೆ ಆಟದ ವಸ್ತುವನ್ನು ಕೊಡುವೆನು" ಎಂದು ತಾಪಸಿಯರು ಮಗುವಿಗೆ ಹೇಳತೊಡಗಿ ದಾಗ ಎಲ್ಲಿದೆ ಕೊಡೆಂದು ಸರ್ವದಮನನು ಕೈನೀಡಿದನು. "ಆತನ ಕೈ ಯನ್ನು ಕುರಿತು ಕಾಳಿದಾಸನು ದುಷ್ಯಂತನಿಂದ ವರ್ಣಿಸುತ್ತಿರುವನು. ಆ ವರ್ಣನೆ ಇಂತಿದೆ.

ಪ್ರಲೋಭ್ಯ ವಸ್ತು ಪ್ರಣಯ ಪ್ರಸಾರಿತೋ ವಿಭಾತಿಜಾಲಗ್ರಥಿತಾಂಗುಲಿಃಕರಃ ।
ಅಲಕ್ಷ ಪತ್ರಾಂತರಮಿದ್ಧರಾಗಯಾ ನವೋಷಸಾಭಿನ್ನ ಮಿವೈಕ ಪಂಕಜಂ ॥

ಮೋಹವನ್ನು ಹುಟ್ಟಿಸುವ ಆಟದ ಗೊಂಬೆಗೆ ನೀಡಿದ ಬೆರಳುಗಳಿಂದ ಎಡೆಗೊಂಡ ಕೈಯು ಕೆಂಪಿಡಿದ ನವ [ಹೊಸ] ಉಪಸ್ಸಿನಿಂದ ಎಲೆಗಳೆಡೆ ಹುದುಗಿರುವ ತಾವರೆ ಒಡೆದಂತೆ ಶೋಭಿಸುತ್ತಿದೆ. ಎಂದು ನವೋಷಸ್ಸಿನಿಂದ ಒಡೆದ ತಾವರೆಯ ಉಪಮೆಯನ್ನು ಸರ್ವದಮನನ ಕೈಗೆ ಕವಿ ಕೊಟ್ಟಿರುತ್ತಾನೆ. ಕವಿಗೆ ಈ ಉಪಮೆಯಿಂದ ಹಲವು ವಿಷಯಗಳನ್ನು ಹೇಳಬೇಕಾಗಿದೆ. ಒಂದೆಡೆ ಆ ಬಾಲಕನ ಕೈ ಪದ್ಮರೇಖೆಯೇ ಮೊದಲಾದವುಗಳಿಂದ ಕೂಡಿದೆ. ರಾಜಚಿಹ್ನೆಗಳಿವೆ ಎಂದೆನ್ನ ಬೇಕಾಗಿದೆ. ಇನ್ನೊಂದೆಡೆ ಆಗ ತಾನೇ ಮೂಡಿದ ಉಷೆ. ಉಷಕಾಲದಲ್ಲಿ ಒಡೆದು ತೋರುವ ತಾವರೆಯ ಸೌಂದರ್ಯವೇನು? ಸರ್ವದಮನನ ಕೈ ಅರಳಲಿರುವ ಉಷಾಕಾಲದ ತಾವರೆ. ತಾವರೆಯಂತೆ ಮಾರ್ದವಗುಣದಿಂದ ಕೂಡಿದ ಕೈ. ಸರ್ವದಮನನ ಕೈ ಅತಿ ಆಕರ್ಷಕ ವಿದ್ದಿತು. ಅದಲ್ಲದೆ ಆಟದ ವಸ್ತುವಿಗೆ ನೀಡಿದ ಕೈ. ಈ ಕೈ ಅರಳುತ್ತಿರುವ ಉಷಸ್ಸಿನ ತಾವರೆಯಂತಿದ್ದಿತು. ಎಳೆ ಹುಡುಗನ ಕೈ ವಿಕಾಸಗೊಳ್ಳದ ತಾವರೆಯಂತಹುದು. ಅದು ಆಗ ತಾನೇ ಮೂಡಿದ ಉಷಸ್ಸಿಗೆ ಒಡೆದ ತಾವರೆಯ ಬೆಡಗನ್ನು ಹೊಂದಿದ್ದು ಆಕರ್ಷಕವೆನಿಸಿತ್ತು. ಇಲ್ಲಿ ಕೊಟ್ಟಿರುವ ಉಪಮೆ ಪ್ರಕೃತಿಯಿಂದ ಎತ್ತಿದುದಾಗಿದ್ದು ಅನೇಕ ಉಚ್ಚ ಭಾವನೆಗಳಿಂದ ಕೂಡಿರುತ್ತದೆ.

ತಾರಕನ ಪೀಡೆ ದೇವತೆಗಳಿಗೆ ಅಸಾಧ್ಯವಾಯಿತು. ಸೂರ್ಯನು ತಾರಕನ ಆಜ್ಞೆಯಂತೆ ಕಮಲಗಳು ಅರಳುವಷ್ಟೇ ಬೆಳಕನ್ನು ಬೀರುತಿದ್ದನು. ಚಂದ್ರನು ಎಂದೂ ಸಂಪೂರ್ಣ ಕಲೆಯಿಂದ ಕೂಡಿ ಬೆಳಗುತಿದ್ದನು. ಗಾಳಿಯು ಹೂದೋಟ ಹಾಳಾಗುವ ಭಯದಿಂದ ಅಧಿಕವಾಗಿ ಬೀಸುತಿದ್ದಿಲ್ಲ. ಕಸಬರಿಕೆಯ ಕೆಲಸಮಾಡುತಿದ್ದನು. ಬೀಸಣಿಗೆಯ ಕಾರ್ಯಭಾರ ತಾರಕನಲ್ಲಿ ವಾಯುವಿನಿಂದ ನಡೆಯುತಿತ್ತು. ಸದಾಕಾಲ ಎಲ್ಲಾ ಋತುಗಳಿದ್ದು ಫಲಿಸುತಿದ್ದುವು. ವರುಣ ಅಗ್ನಿ ಇವರೆಲ್ಲಾ ನೀರಿನ ಅಡಿಗೆಯ ಚಾಕರಿಯವರಾದರು. ಈ ಕಷ್ಟಗೊಂಡ ದೇವತೆಗಳು ಬ್ರಹ್ಮನಲ್ಲಿ ದೂರಿಟ್ಟುಗೊಂಡರು. ಆಗ ಬ್ರಹ್ಮನು ನಾನೇ ಆತನನ್ನು ವರಕೊಟ್ಟು ಬೆಳೆಸಿದೆನು. ತಾನು ವಿಷವೃಕ್ಷವನ್ನೇ ಬೆಳೆಸಿದರೂ ಅದನ್ನು ತನ್ನ ಕೈಯಿಂದ ಕಡಿಯುವುದು ಯೋಗ್ಯವಲ್ಲ. ನೀವು ಶಿವನನ್ನು ಆಶ್ರಯಿಸಿರಿ, ಎಂಬಾಗ ಕಾಳಿದಾಸನು ಹೀಗೆನ್ನುವನು.

ಉಮಾರೂಪೇಣ ತೇ ಯೂಯಂ ಸಂಯಮಸ್ತಿಮಿತಂ ಮನಃ ।
ಶಂಭೋರ್ಯತಧ್ವಮಾಕ್ರಷ್ಟುಮಯಸ್ಕಾಂತೇನ ಲೋಹವತ್ ॥

ಕಾರ್ಯಾರ್ಥಿಗಳಾದ ನೀವು ತಪಸ್ಸಿನಿಂದ ನಿಶ್ಚಲವಾಗಿರುವ, ಶಿವನ ಮನಸ್ಸನ್ನು ಪಾರ್ವತಿಯು ಸೌಂದರ್ಯದಿಂದ ಅಯಸ್ಕಾಂತದ ಮೂಲಕ ಕಬ್ಬಿಣವನ್ನುಸೆಳೆವಂತೆ ಸೆಳೆಯ ಯತ್ನಿಸಿರಿ" ಎಂದು ಬ್ರಹ್ಮನು ಹೇಳುವನು. ಲೋಹಚುಂಬಕವು ಕಬ್ಬಿಣವನ್ನು ಸೆಳೆವಂತೆ ಪಾರ್ವತಿಯು ಚೆಲುವೇ ಸೆಳೆಯಲಿರುವ ಕರಣ ರೂಪವೆಂದು ಬ್ರಹ್ಮನು ಹೇಳುತ್ತಿರುವನಾದರೂ ದೃಢವಾದ ಮನಸ್ಸಿನ ಯೋಗಿಯನ್ನೂ ಕದಲಿಸುವುದು ಸೌಂದರ್ಯ. ಈ ಸೌಂದರ್ಯದ ಮೂಲಕ ಲೋಹವನ್ನು ಲೋಹಚುಂಬಕ ಸೆಳೆವಂತೆ ಎಲ್ಲಾ ಕೆಲಸವನ್ನೂ ಸಾಧಿಸಬಹುದು ಎಂದೊರೆವ ಈ ಮಾತು ಎಷ್ಟು ಸೊಗಸಾಗಿದೆ. ಸ್ತ್ರೀಯ ಚೆಲುವು ದೃಢಮನಸ್ಸಿನವನನ್ನೂ ಲೋಹದ ಮುಂದೆ ಲೋಹಚುಂಬಕವಿರಿಸಿದಂತೆ ಎಂಬ ಈ ಉಪಮೆ ಎಷ್ಟು ಸತ್ಯಪೂರ್ಣವಾಗಿದೆ. ಇಂತಹ ಸತ್ಯಪೂರ್ಣ ಉನ್ನತ ವಿಚಾರ ತತ್ವದ ಉಪಮೆಗಳು ಕಾಳಿದಾಸನಲ್ಲಿವೆ. ಅವುಗಳನ್ನೆಲ್ಲಾ ಹೆಕ್ಕಹೋದರೆ ಉಳಿದ ಆತನ ಗ್ರಂಥ ವಿಷಯ ಭಾಗಗಳು ಹಿಂದಕ್ಕೇ ಉಳಿಯುವವು. ವಾಚಕರು ಗ್ರಂಥಗಳಿಂದ ಅಧ್ಯಯನಗೆಯ್ದು ಅವನ ಉಪಮಾ ಸೌಂದರ್ಯವನ್ನು ಇನ್ನೂ ಕಾಣಲಿ.



# ರೂಪಕ ರಂಗ ರಚನೆಯ ಕಾಲ ಕಲಾಪರನಾದ ಕಾಳಿದಾಸ.

ಕಾಳಿದಾಸನ ಕಾಲವಾಗಿ ಎಷ್ಟೋ ವರ್ಷಗಳಾದುವು. ವರ್ಷಗಳಲ್ಲಾ ಶತಮಾನಗಳೂ ಆದುವು. ಅವನ ಹೆಸರು ಸಮಾಜದಲ್ಲಿ ಇನ್ನೂ ಅಳಿದು ಹೋಗಿಲ್ಲ. ಕಲ್ಲಿನಲ್ಲಿ ಕೆತ್ತಿದ ಅಕ್ಷರದಂತೆ ಭದ್ರವಾಗಿದೆ. ಎಲ್ಲಾ ದೇಶದ ವಿದ್ವದ್ಗೋಷ್ಠಿಗಳಲ್ಲಿ ಇವನ ಹೆಸರು ಬರುತ್ತದೆ. ಕವಿಗಳ ನಾಮಸ್ಮರಣೆ ಮಾಡಲು ತೊಡಗಿದರೆ ಕಾಳಿದಾಸನ ನಾಮವನ್ನು ಮೊತ್ತಮೊದಲು ಉಚ್ಚರಿಸ ಬೇಕು. ಅವನ ಕೃತಿಗಳಿಗೆ ಲೆಕ್ಕವಿಲ್ಲದಷ್ಟು ಪುಟಗಳ ವಿಮರ್ಶೆಗಳಾಗಿವೆ. ಅವನ ಕೃತಿಯಲ್ಲಿ ವಿಶ್ವದ ಸೌಂದರ್ಯವು, ಅದೇ ಪ್ರಕೃತಿಸೌಂದರ್ಯವು ನಲಿಯುತ್ತಲಿದೆ. ಆದುದರಿಂದ ಅಕ್ಷರಾಭಿಜ್ಞರು ಅವನ ಕೃತಿಯ ರಸವನ್ನು ಕುಡಿದಷ್ಟೂ ತೃಪ್ತರಾಗುವುದಿಲ್ಲ; ಎಂದ ಮೇಲೆ ನಾವೂ ಅವನ ಕೃತಿಯ ರಸದ ಒಂದು ಹನಿಯನ್ನಾದರೂ ನಾಲಿಗೆಯಿಂದ ಚಪ್ಪರಿಸಬೇಡವೇ?

"ಅದ್ಯಾಪಿ ಕಾವ್ಯೇಷು ನಾಟಕಂ ರಮ್ಯಂ ತತ್ರಾಪಿಚ ಶಕುಂತಲಾ" ಎಂಬ ನುಡಿಯನ್ನು ಕಾವ್ಯಜ್ಞರಿಂದ ಕೇಳುತ್ತೇವೆ. ಈ ಕಾವ್ಯ ರಸಾಸ್ವಾದಕನ ಮಾತು ಬದಿಗಿರಲಿ. ಕವಿಗಳಲ್ಲಿ ಪ್ರಥಮ ಸ್ಥಾನವನ್ನು ವಹಿಸಿದ ಈತನು ಶಾಕುಂತಲದಲ್ಲಿ ಶೃಂಗಾರರಸವನ್ನು ಪ್ರಧಾನವಾಗಿ ಬಣ್ಣಿಸಿರುವನು. "ಶೃಂಗಾರ ಏವರಸಃ ಪರಪ್ರಹ್ಲಾದಕೋಮತಃ" ಎಂಬ ಪೂರ್ವಜರ ಮಾತು ಈ ವಿಷಯ ವನ್ನು ನೆನೆದಾಗ ನೆನಪಿಗೆ ಬರುತ್ತಿದೆ. ಇದೊಂದೇ ಕಾರಣದಿಂದ ನಾಟಕ ಗಳಲ್ಲಿ ಶಕುಂತಲಕ್ಕೆ ಅಗ್ರಸ್ಥಾನವು ಸಿಕ್ಕಿತೇ? "ಶೃಂಗಾರ ಏವರಸಃ ಪರಪ್ರಹ್ಲಾದಕೋಮತಃ" ಎಂದು ಒಂದೆಡೆ ಇದ್ದರೆ "ಏಕೋ ರಸಃ ಕರುಣ ಏವ" ಎಂದು ಇನ್ನೊಂದೆಡೆ ಇರುತ್ತದೆ. ಆದುದರಿಂದ ಶಾಕುಂತಲದಲ್ಲಿ ಶೃಂಗಾರರಸವು. ಅದೇ ಅದರ ಉತ್ಕೃಷ್ಟತೆಗೆ ಕಾರಣ ಎನ್ನಲಾಗುವುದಿಲ್ಲ. ಇದರಿಂದ ವ್ಯತಿರಿಕ್ತವಾದ ಇನ್ನೊಂದು ಕಾರಣವು ಇದ್ದೇ ಇರಬೇಕು. ಶೃಂಗಾರ ರಸವೇ ಇದರ ಔನ್ನತ್ಯಕ್ಕೆ ಮುಖ್ಯವಾದ ಕಾರಣವಾದರೆ ಇದಕ್ಕಿಂತ ಹೆಚ್ಚಾಗಿ ಶೃಂಗಾರರಸವನ್ನು ಬಣ್ಣಿಸಿದ ಕೃತಿಗಳಿಲ್ಲವೇ? ಗೀತಗೋವಿಂದದಲ್ಲಿರುವ ರಸ ವಾವುದು? ಇದಲ್ಲದೆ ರೂಪಕಗಳಲ್ಲಿ ಮಾಲತೀಮಾಧವ, ಪಾರ್ವತೀಪರಿಣಯ, ಸುಭದ್ರಾವಿಜಯ, ನಳಚರಿತೆ ಇವುಗಳಲ್ಲಿನ ರಸವಾವುದು? ರತ್ನಾವಳಿ ನಾಟಿ

ಕೆಯು ಯಾವ ರಸದಿಂದ ಕೂಡಿದೆ? ಶತಕಗಳಲ್ಲಿ ಶೃಂಗಾರ ಶತಕವಿದೆ. ಇವು ಗಳಲ್ಲದೆ ಇನ್ನೂ ಇತರ ಖಂಡಕಾವ್ಯಗಳೂ, ಕಾದಂಬರಿಗಳೂ ಶೃಂಗಾರರಸ ದಿಂದ ಕೂಡಿವೆ. ಶೃಂಗಾರವು ಲೋಕರಂಜನೆಯನ್ನು ಗೈಯುವುದರಲ್ಲಿ ಸಮರ್ಥವಾದ್ದು. ಇನ್ನಿತರ ರಸಗಳು ಲೋಕರಂಜನೆಯನ್ನು ಗೈಯಲು ಸಮರ್ಥಗಳಲ್ಲ ಎಂದು ಹೇಳುವ ಮಾತಿಗೆ ಯಾವ ತರದ ಬೆಲೆಯೂ ಇಲ್ಲ. ಶೃಂಗಾರರಸವು ಮಾತ್ರ ಲೋಕರಂಜನೆಗೆ ಶಕ್ತಿಯುಳ್ಳದಾದರೆ ಇನ್ನಿತರ ರಸಗಳ ನಾಟಕಗಳು ಏಕೆ ಇತರ ಕವಿಗಳಿಂದ ಬರೆಯಲ್ಪಟ್ಟವು? ಮಾತ್ರವಲ್ಲ, ಅಂತಹ ಗ್ರಂಥಗಳನ್ನು ಲೋಕವು ಏಕೆ ಸ್ವೀಕರಿಸಿತು? ಭಟ್ಟನಾರಾಯಣನ ವೇಣೀ ಸಂಹಾರವೂ, ವಿಶಾಖದತ್ತನ ಮುದ್ರಾ ರಾಕ್ಷಸವೂ ವೀರರಸ ಪ್ರಧಾನಗಳು. ಸಂಸ್ಕೃತ ವಾಙ್ಮಯದಲ್ಲಿ ವೀರರಸ ನಿಷ್ಯಂದಿಗಳಾವುವೆಂದರೆ ವೇಣೀಸಂಹಾರ ಮುದ್ರಾರಾಕ್ಷಸಗಳೇ? ಚಂದ್ರಗುಪ್ತನ ರಾಜ್ಯಪ್ರಾಪ್ತಿಯ ವಿಷಯವೇ ಮುದ್ರಾ ರಾಕ್ಷಸದ ಕಥಾವಸ್ತು. ಈ ನಾಟಕವನ್ನು ವಿಶಾಖದತ್ತನು ಚಂದ್ರಗುಪ್ತನ ಎದುರಿನಲ್ಲೇ ಅಭಿನಯಿಸಿರುವನು. ಪಾರಿತೋಷಿಕಗಳನ್ನೂ ಪಡೆದಿರುವನು ಎಂಬುದು ಕರ್ಣಾಕರ್ಣಿಕೆ. ಆದರೆ ಈ ಎರಡು ಗ್ರಂಥಗಳೂ ಸಂಸ್ಕೃತ ವಾಙ್ಮಯದ ಅನರ್ಘರತ್ನಗಳಾಗಿದ್ದು ಭಾಷಾಸರಣಿಯಿಂದಲೂ ಬಂಧ ಗೌರವ ದಿಂದಲೂ ಸೇರಿವೆ. ಭಾಷಾಭಿಜ್ಞರಿಗೆ ಇವುಗಳಲ್ಲಿ ಅನಾದರತೆ ಏನೂ ಇಲ್ಲ. ಇನ್ನೊಂದೆಡೆ ಭವಭೂತಿಯ ಕರುಣಾತ್ಮಕ ಗ್ರಂಥಗಳಿಗೆ ಮೆಚ್ಚಿ ಕಣ್ಣೀರನ್ನು ತಾರದವರಿಲ್ಲ. ಹೀಗಿರಲು ಶೃಂಗಾರರಸವೇ ಲೋಕಾಕರ್ಷಕವಾದ್ದು ಎಂದು ಹೇಳುವುದು ಸಮಂಜಸವಲ್ಲ. ಈ ವಿಷಯವು ಶೃಂಗಾರಕ್ಕೆ ಹರಿ, ಹಾಸ್ಯಕ್ಕೆ ಗಜಾಸ್ಯನು, ರೌದ್ರಕ್ಕೆ ಹರನು, ಕರುಣಕ್ಕೆ ಅಂತಕನು, ವೀರಕ್ಕೆ ಇಂದ್ರನು, ಭೀತಿಗೆ ಮೃತ್ಯು, ಅದ್ಭುತಕ್ಕೆ ವಿಧಿಯು, ಬೀಭತ್ಸಕ್ಕೆ ಮಹಾಕಾಳನು ಎಂದಂ ತಾಗುವುದು. ಹರಿಯು ಹದಿನಾರು ಸಾವಿರ ಗೋಪಿಯರೊಂದಿಗಿದ್ದುದೇ ಇದಕ್ಕೆ ಕಾರಣ ಅಥವಾ ಪುನಃ ಪುನಃ ಜನ್ಮವನ್ನು ತಳೆದುದೇ? ಗಜಾಸ್ಯನಿಗೆ ಹಾಸ್ಯವಂತೆ. ಅವನ ಮೂಗು ಡೊಂಕಾಗಿದ್ದುದೇ, ಅಲ್ಲ ಲಂಬೋದರನಾಗಿ ಇಲಿಯ ಮೇಲೆ ಕುಳಿತುದೇ? ಹರನು ರುಂಡಮಾಲೆಯನ್ನು ಹಾಕಿರುವನು, ಇದೇ ರುದ್ರಕ್ಕೆ ಕಾರಣ. ಇಲ್ಲವೇ ಪನ್ನಗಭೂಷಣನಾಗಿದ್ದುದೇ? ಅಂತಕನಿಗೆ ಕರುಣೆಯಂತೆ! ಕೋಣನ ಮೇಲೆ ಕುಳಿತು ಕಾಣುವಾಗ ನಮಗೆ ಕರುಣೆ ತೋರುವುದೇ? ಇಲ್ಲವೇ ದಂಡವನ್ನು ಧರಿಸಿದುದೇ? ವೀರಕ್ಕೆ ಇಂದ್ರನು

ಇವನು ನೂರು ಯಾಗಗಳನ್ನು ಮಾಡಿ ದಕ್ಷಿಣೆಯನ್ನು ಭಟ್ಟರಿಗೆ ಕೊಟ್ಟುದೇ ವೀರಕ್ಕೆ ಒಡೆಯನಾಗಲು ಕಾರಣ. ಇಲ್ಲವೇ ಗುರುಗಳ ಮುಂದೆ ಪೀಠವನ್ನು ಮುಂಡಿಸಿರುವುದೇ? ಅದೂ ಅಲ್ಲವೇ, ವಜ್ರಾಯುಧವನ್ನು ಹಿಡಿದುದೇ? ಹೀಗಿರುವ ವಿಷಯಗಳನ್ನು ಆ ದೇವತೆಗಳು ತಿಳಿದರೆ ಪಾಡೇನು? ಅಪಮಾನ ನಷ್ಟಕ್ಕೆ ಕೋರ್ಟಿಗೆ ಹೋಗುತ್ತಿದ್ದರು.

ಕಾಳಿದಾಸನಿಗೆ ಶೃಂಗಾರರಸ ಚಕ್ರವರ್ತಿ ಪೀಠವು ದೊರೆತಿದೆ. ಇದು ಎಂತು ದೊರಕಿತು, ಬರೇ ಕಾಮುಕರ ಚಿತ್ರವನ್ನು ಬಿಚ್ಚಿ ಲಭಿಸಿತೇ? ಛೀ. ಇಂತಹ ಬಿರುಸಾದ ಮಾತನ್ನು ಎತ್ತಬಾರದು. ಪಾರ್ವತಿಯು ಪರಿಣಯವು ಧರ್ಮಕ್ಕೆ ಸೋತ ಶಿವನಿಗಾಗಿದೆ. ಇದೇ ಕುಮಾರಸಂಭವದ ಪಾರ್ವತೀ ಪರಿಣಯದಿಂದ ಲಭಿಸುವ ತತ್ವ. ಇಂತೇನಾದರೂ ಶಾಕುಂತಲಾ ನಾಟಕದಲ್ಲಿ ಜಾಣ್ಮೆಯನ್ನು ಹೂಡಿರುವನೇ ಎಂದು ಮುಂದೆ ವಿಚಾರಿಸೋಣ.

ಈ ಗ್ರಂಥವು ಭಾರತ ಪದ್ಮಪುರಾಣ ಇವುಗಳೆರಡರ ಸಂಗ್ರಹದಿಂದಲಾಗಿದೆ. ಕತೆಯಾದರೋ ಭರತನ ಪಿತನದು, ದುಷ್ಯಂತನದು. ಒಂದಾನೊಂದು ದಿನ ಮೃಗಯಾಸಕ್ತನಾಗಿ ದುಷ್ಯಂತನು ಕಾಡಿಗೆ ಹೋದನು. ಅಲ್ಲಿ ಒಂದು ಕೃಷ್ಣಸಾರವನ್ನು ಕಂಡನು. ಅದನ್ನು ಬೆನ್ನಟ್ಟಿದನು. ಬೆನ್ನಟ್ಟುತ್ತಾ ಮುಂದರಿಯಲು ಮೃಗವು ಕಣ್ವನ ಆಶ್ರಮಕ್ಕೆ ಸಮೀಪಿಸಿತು. ಸಮಿಧೆಗಾಗಿ ಹೊರಟ ಋಷಿಕುಮಾರರು ದುಷ್ಯಂತನ ಬಾಣಸಂಧಾನವನ್ನು ತಡೆದರು. ಕೂಡಲೇ ಋಷಿಕುಮಾರರು ಮಾಲಿನೀ ತೀರದಲ್ಲಿರುವ ಕುಲಪತಿಯ ಆಶ್ರಮದ ಆತಿಥ್ಯವನ್ನು ಕಾಲಾತಿಪಾತವು ಉಂಟಾಗದಾದರೆ ಕೈಕೊಳ್ಳಬೇಕು ಎಂದು ಬೇಡಿದರು" ಕುಲಪತಿಯ ಆತಿಥ್ಯಕ್ಕಾಗಿ ಶಕುಂತಲೆಯನ್ನು ನಿಯೋಗಿಸಿರುವುದನ್ನೂ ತಿಳಿಸಿದರು. ಕೂಡಲೇ ರಾಜನು ವಿನೀತವೇಶದಿಂದ ತಪೋವನಕ್ಕೆ ಪ್ರವೇಶಿಸಿದನು ಅಲ್ಲಿ ಸಖಿಯರೊಂದಿಗೆ ನೀರೆರಚುತ್ತಲಿರುವ ಶಕುಂತಲೆಯನ್ನು ನೋಡಿದನು. ಶಕುಂತಲೆಯ ರೂಪಕ್ಕೆ ಮರುಳಾದನು. ಕಣ್ವಪುತ್ರಿಯೆಂದೇ ಶಕುಂತಲೆಯನ್ನು ಮೊದಲು ಬಗೆದನು. ಆ ಮೇಲೆ ಸಖಿಯರ ಮೂಲಕ ಅವಳ ಜನ್ಮವೃತ್ತಾಂತವನ್ನು ತಿಳಿದನು. ಅನೇಕ ಸರಸ ಸಲ್ಲಾಪಗಳು ನಡೆದುವು. ನಾಯಿಕಾ ನಾಯಕರಿಗೆ ಪ್ರೇಮಘಟನೆಯಾಯಿತು. ಗಾಂಧರ್ವ ವಿಧಿಯಿಂದ ವಿವಾಹವು ನಡೆಯಿತು. ಅಷ್ಟರಲ್ಲೇ ದುಷ್ಯಂತನು ಸ್ವನಗರಕ್ಕೆ ಹೋದನು. ಇತ್ತ ಶಕುಂತಲೆಯು ಅಂತರ್ವತ್ನಿಯಾದಳು.

ರಾಜನಿಗೆ ನಗರಕ್ಕೆ ಹೋದವನಿಗೆ ಶಕುಂತಲೆಯ ನೆನಪಿಲ್ಲ, ಈ ವೃತ್ತಾಂತ ಗಳನ್ನೆಲ್ಲಾ ಯಾಗಶಾಲೆಯಲ್ಲಿದ್ದ ಕಣ್ವನು ತಿಳಿದನು. ಆ ಮೇಲೆ ಕಣ್ವನು ಮುನಿವಟುಗಳೊಂದಿಗೆ ಹಸ್ತಿನಾವತಿಗೆ ಶಕುಂತಲೆಯನ್ನು ಕಳುಹಿಸುವನು. ರಾಜನು ಶಕುಂತಲೆಯನ್ನು ತಿರಸ್ಕರಿಸುವನು. ಋಷಿಕುಮಾರರು ಅಲ್ಲೇ ಶಕುಂತಲೆಯನ್ನು ಬಿಟ್ಟು ಕುಲಪತಿಯಲ್ಲಿಗೆ, ಹಿಂತಿರುಗುವರು. ದುಃಖಿತೆ ಯಾದ ಪುತ್ರಿಯನ್ನು ಮೇನಕೆಯು ತನ್ನಲ್ಲಿಗೆ ಕೊಂಡೊಯ್ಯುವಳು. ರಾಜನು ಸ್ವಲ್ಪ ಕಾಲದ ನಂತರ ಶಕುಂತಲೆಗೆ ಕೊಟ್ಟಿದ್ದ ಉಂಗುರವನ್ನು ಧೀವರನ ಮುಖವಾಗಿ ಹೊಂದುವನು. ತನ್ಮೂಲಕ ಪ್ರಿಯಾಸ್ಮರಣೆಯಾಗುವುದು. ಪುನಃ ಶಕುಂತಲಾ ವಿಯೋಗ ಶೋಕಾನಲನು ರಾಜನನ್ನು ಎದೆಗೆಡಿಸುವುದು. ಅಷ್ಟರಲ್ಲೇ ಮಾತಲಿಯು ಇಂದ್ರನಿಗೆ ರಾಕ್ಷಸ ಸಂಹಾರಕ್ಕಾಗಿ ಸಹಾಯಿ ಯಾಗಲು ಕರಕೊಂಡು ಸ್ವರ್ಗಕ್ಕೆ ಹೋಗುವನು. ಅಲ್ಲಿ ಜಯಲಕ್ಷ್ಮಿಯನ್ನು ಹೊಂದಿ ಇಂದ್ರನ ಮನ್ನಣೆಗೆ ಪಾತ್ರನಾಗುವನು. ಪುನಃ ಭೂಲೋಕಕ್ಕೆ ಬರುವಾಗ ಮರೀಚಾಶ್ರಮಕ್ಕೆ ಹೋಗುವನು. ಅಲ್ಲಿ ತಪಸ್ಸು ಮಾಡುತ್ತಿರುವ ಶಕುಂತಲೆಯನ್ನೂ ಬಾಲಕೇಲಿಯಿಂದ ಕೂಡಿದ ಸ್ವಪುತ್ರನನ್ನೂ ಕಾಣುವನು. ಅನಂತರ ಮರೀಚಿಯ ದರ್ಶನಕ್ಕೆ ಹೋಗುವನು. ಪತ್ನೀಪುತ್ರರಿಂದ ಕೂಡಿ ಆ ಮೇಲೆ ಸುಖವಾಗಿರುವನು. ಇದೇ ಈ ನಾಟಕದ ಕಥಾವಸ್ತು. ಕಾಳಿ ದಾಸನು ಶಕುಂತಳೆಯ ತಿರಸ್ಕಾರಕ್ಕೆ ದೂರ್ವಾಸನ ಶಾಪವನ್ನು ಮೂಲಕಾರಣ ವನ್ನಾಗಿ ಮಾಡಿದನು. ಇದು ನಾಯಕ ದೋಷನಿರಾಕರಣೆಗಾಗಿ ಕವಿ ಕಪೋಲ ಕಲ್ಪಿತವಾಯಿತು. ಉಳಿದ ವಿಷಯಗಳೆಲ್ಲಾ ಪದ್ಮಪುರಾಣಭಾರತಗಳಲ್ಲಿವೆ.

ಕವಿಯನಾಯಕನು ನಾಗರಿಕನು. ಚಕ್ರವರ್ತಿ ಪದವಿಯನ್ನು ವಹಿಸಿ ದವನು. ಎಂದ ಮೇಲೆ ಅವನ ಭೋಗ ಸೌಖ್ಯವನ್ನೂ ಕಲಾ ನೈಪುಣ್ಯವನ್ನೂ ಹೇಳಬೇಕಾದುದು ಇದೆಯೇ? ಶಕುಂತಲೆಯು ಜನ್ಮದಿಂದ ಕಾಡಿನಲ್ಲಿ ಬೆಳೆದ ವಳು. ಕಾಡುಸನ್ಯಾಸಿಗಳ ಒಡನಾಟದವಳು. ಹಿಂದೆ ಕೇಳದ ಕಾಣದ ನಾಯಕ ನಾಯಕಿಯರಿಗೆ ಫಕ್ಕನೆ ಅನುರಾಗ ಘಟನೆ ವಿವಾಹ. ಈ ಚಮ ತ್ಕಾರವು ಕವಿಯ ಚಾತುರಿಯಿಂದ ಮರೆಮಾಜಿದೆ. ಶೃಂಗಾರ ರಸವು ಎಲ್ಲೆಲ್ಲೂ ಹರಡಿದೆ. ದಂಪತಿಗಳಿಗೆ ಎಡೆಯಲ್ಲಿ ದೂರ್ವಸ ಶಾಪವುಂಟಾಗಿ ವಿಯೋಗವು ಜನಿಸಿದೆ. ಶೃಂಗಾರವು ವಿಪ್ರಲಂಭ ಯುಕ್ತವಾಗಿ ಮತ್ತಷ್ಟು ಪರಿಪೋಷಕ ವಾಗಿದೆ. ದುಷ್ಯಂತನನ್ನೂ ಶಕುಂತಲೆಯನ್ನೂ ಶೃಂಗಾರ ರಸ ವಿಷಯದಲ್ಲಿ

ಕಾಳಿದಾಸನು ಬಿಡಿಸಿದ ಚಿತ್ರವು ಕಾಮುಕರ ಕರ್ಮದಂತಿದೆ. ನೀರನ್ನು ಎರಚುವಾಗ ಅಡಗಿ ಶಕುಂತಲೆಯನ್ನು ನೋಡುವುದು, ಅರಡಿಯ ಬಾಧೆಯನ್ನು ಮಾಡಿಸುವುದು. ಮಾಲಿನೀ ತೀರದಲ್ಲಿ ದುಷ್ಯಂತನು ಸಂಚರಿಸುವುದು. ಇವುಗಳೆಲ್ಲಾ ರಾಜನಿಗೆ ಯೋಗ್ಯಗಳಾದ ಚಿತ್ರಗಳಲ್ಲ. ಶಕುಂತಲೆಯ ವಿಷಯವು ಹಾಗಿರಲಿ. ಇನ್ನು ನಾಲ್ಕನೇ ಅಂಕದಲ್ಲಿ ಬಂದ ಸಮಾಜದ ಭಾವಗಳನ್ನು ಚಿಂತಿಸೋಣ. ಇಲ್ಲಿ ಕಣ್ವನು ಕೇವಲ ಗಾರ್ಹಸ್ಥ್ಯ ಜ್ಞಾನವನ್ನು ತುಂಬಿದವನು. ಅವನಿಗೆ ಶಕುಂತಲೆಯನ್ನು ಪತಿಗೃಹಕ್ಕೆ ಕಳುಹಿಸುವಾಗ ಎದೆಯು ಕಳವಳವನ್ನು ಹೊಂದಿತು. ಕಂಠವು ಉಮ್ಮಳಿಸಿತು. ದೃಷ್ಟಿಯು ಕಣ್ಣೀರಿನಿಂದ ತುಂಬಿತು. ಇಂತಲ್ಲವೇ ತಮ್ಮ ಹೆಣ್ಣು ಮಕ್ಕಳನ್ನು ಪತಿಗೃಹಕ್ಕೆ ಕಳುಹಿಸುವಾಗ ಉಂಟಾಗುವ ಸ್ಥಿತಿ! ಶಕುಂತಲೆಗೆ ಕಣ್ವನು ಆಶೀರ್ವದಿಸಿದುದೇನು? ಪತಿಗೃಹಕ್ಕೆ ಹೋಗು. ಅಲ್ಲಿ ಯಯಾತಿ ಮಹಾರಾಜನಿಗೆ ಶರ್ಮಿಷ್ಠೆಯು ಇದ್ದಂತೆ ಗಂಡನ ಹಿತಪರಳಾಗು. ಯಯಾತಿ ಶರ್ಮಿಷ್ಠೆಯರು ಪಡೆದ ಪುರೂರವನಂತಹ ಪುತ್ರನನ್ನು ಪಡೆಯುವಳಾಗು. ಈ ಮಾತು ಎಷ್ಟರದು, ಶಕುಂತಲೆಗೆ ತಪೋವನ ವೃಕ್ಷಗಳಲ್ಲಿನ ಪ್ರೇಮವು ಎಂತಹುದು. ವೃಕ್ಷಗಳ ಪಾತೆಗಳಿಗೆ ನೀರೆರೆಯದೆ ನೀರು ಕುಡಿಯುತ್ತಿದ್ದಿಲ್ಲ. ಸಿಂಗರದಲ್ಲಿ ಅಸಕ್ತಳಾದರೂ ವೃಕ್ಷಗಳ ಚಿಗುರನ್ನು ಚಿವುಟುತ್ತಿದ್ದಿಲ್ಲ. ಅವುಗಳಲ್ಲಿ ಪುಷ್ಪವು ಕಂಡರೆ ಅವಳಿಗೆ ಆನಂದವಾಗುತಿದ್ದಿತು. ಇಂತಹಳಲ್ಲವೇ ಲೋಕಪಾಲಕನಿಗೆ ಮಹಿಷಿಯಾಗಬೇಕಾದುದು. ಪತಿಗೃಹಕ್ಕೆ ಹೋದ ಮೇಲೆ ಶಕುಂತಲೆಯು ಮಾಡತಕ್ಕ ಕರ್ಮಗಳನ್ನು ಲೋಕದ ಪದ್ಧತಿಯಂತೆ ಎಷ್ಟು ಸೊಗಸಾಗಿ ಹೇಳಿದೆ! ಭರ್ತೃ ಗೃಹವನ್ನು ಸೇರಿ ಹಿರಿಯರ ಸೇವೆ ಮಾಡು, ಸವತಿಯರಲ್ಲಿ ನಿರ್ಮತ್ಸರಳಾಗಿ ಗೆಳೆತನವನ್ನು ಬಳಿಸು, ಪತಿಯು ಮುಳಿದರೂ ಮುಳಿಯದಿರು. ಪರಿಜನರನ್ನು ತಕ್ಕಂತೆ ನೋಡು. ಇವೇ ಅಲ್ಲಿನ ಮಾತುಗಳು. ಇಂತಹ ಮಾತುಗಳನ್ನಲ್ಲವೇ ಜನನೀ ಜನಕರು ಹೆಣ್ಣು ಮಕ್ಕಳನ್ನು ಪತಿಗೃಹಕ್ಕೆ ಕಳುಹಿಸುವಾಗ ಹೇಳ ಬೇಕಾದುದು. ನಾಲ್ಕನೇ ಅಂಕದ ತುತ್ತ ತುದಿಯ ಕಣ್ವನು ವೇದಾಂತಿಗಳ ಮಾರ್ಗವನ್ನು ಹತ್ತುವವನು. ಅವನ ಆಗಿನ ಮಾತು ಸ್ತ್ರೀಯು ಹೆರವರ ಒಡವೆಯು, ಆದುದರಿಂದ ತನ್ನಲ್ಲಿಟ್ಟ ಒಡವೆಯನ್ನು ಅದರ ಯಜಮಾನನಿಗೆ ಕೊಟ್ಟು ನಿಶ್ಚಿಂತನಾಗಿರುವಂತೆ ಶಕುಂತಲೆಯನ್ನು ಪತಿಗೃಹಕ್ಕೆ ಕಳುಹಿಸಿ ನೆಮ್ಮದಿ ಪಡೆದೆನು ಎನ್ನುವನು. ಈ ವಿಷಯಗಳು ಒತ್ತಟ್ಟಿಗಿರಲಿ. ಶಕುಂತಲಾ ನಾಟಕವು ಯಾವಾಗ ಅಭಿನಯಿ

ಸಲ್ಪಟ್ಟಿತ್ತು ಎಂಬುದನ್ನು ವಿಚಾರಿಸುವಾ. ಸೂತ್ರಧಾರನು ಗ್ರೀಷ್ಮಋತು ವರ್ಣನೆಯನ್ನು ಮಾಡಿರುವನು; ಇನ್ನೊಂದೆಡೆ ರಾಜನಿಗೆ ತಾಯಿಯ ಕಾಗದವು ಬರುವುದು "ಇಂದಿನಿಂದ ನಾಲ್ಕನೆಯ ದಿನ ವ್ರತ ಪರಿಸಮಾಪ್ತಿಯ — ದಿನ. ದೀರ್ಘಾಯುವಾದ ನೀನು ಅಂದಿರಬೇಕು" ಎಂದು ಕಾಗದದ ವೃತ್ತಾಂತ. ಸ್ತ್ರೀಯರಿಗೆ ವಟ ಸಾವಿತ್ರೀ ವ್ರತವೇ ಮುಖ್ಯವಾದ್ದು. ಈ ವ್ರತವು ಗ್ರೀಷ್ಮ ಋತುವಿನಲ್ಲಿ; ಮಾತ್ರವಲ್ಲ ಜ್ಯೇಷ್ಠ ಶುಕ್ಲ ಪಕ್ಷದಲ್ಲಿ, ದ್ವಾದಶಿ ತಿಥಿಗೆ ಸಮೀಪಿಸಿದ ದಿನಗಳಲ್ಲಿ, ಪ್ರಥಮಾಂಕದ ಕತೆಯು ಬೆಳಗಿನ ಸಮಯದ್ದು. ಒಂದೆಡೆ ವಲ್ಕಲಗಳಿಂದ ಇಳಿದ ನೀರು ಆರಲಿಲ್ಲ. ಶಕುಂತಲೆಯು ಲತೆಗಳಿಗೆ ನೀರನ್ನು ಎರೆಯುವಳು-ಕುದುರೆಗಳ ಖುರಹತಿಯಿಂದ ಉಂಟಾದ ಧೂಳು ಆರ್ದ್ರ ವಲ್ಕಲಗಳಲ್ಲಿ ಬೀಳುತ್ತಿದೆ, ಎಂದ ಮೇಲೆ ಶಾಕುಂತಲದ ಮೊದಲನೆಯ ಅಂಕದ ದೃಶ್ಯವು ಏಳು ಗಂಟೆಯಿಂದ ಆರಂಭವಾಗಿ ಸಾಮಾನ್ಯ ಒಂಭತ್ತು ಒಂಭತ್ತೂವರೆ ಗಂಟೆಯ ವರೆಗಿನದು. ಎರಡನೆಯ ಅಂಕದ ಕತೆಯು ಒಂದನೇ ಅಂಕದ ಕತೆಯ ಮರುದಿನದು. ಏಕೆಂದರೆ "ಉಷಸ್ಸಿನಲ್ಲೇ ಶಕುನಿಗಳ ವನಗ್ರಹಣ ಕೋಲಾಹಲದಿಂದ ಎಚ್ಚತ್ತವನಾಗಿದ್ದೇನೆ," ಎಂದು ಮಾಢವ್ಯನು ಹೇಳುವುದರಿಂದ ಒಂದು ರಾತ್ರಿಯ ವ್ಯವಧಾನವುಂಟಾಗಿದೆ ಎಂದು ಊಹಿಸಬೇಕಾಗುತ್ತದೆ. ಎರಡನೆಯ ಅಂಕದ ಕಥಾರಂಭ ಮಧ್ಯಾಹ್ನ ಒಂದು; ಎರಡು ಗಂಟೆಯ ನಂತರದ್ದು. "ಮೃಗಯಾಶೀಲನೂ ವಯಸ್ಯನೂ ಆದ ರಾಜನ ಸಹವಾಸದಿಂದ ಸಾಕಾಗಿದ್ದೇನೆ! ಇದು ಹುಲ್ಲೆ, ಇದು ಹಂದಿ, ಇದು ಹುಲಿಯೆಂದು ನೆರಳಿಲ್ಲದ ಈ ಕಾಡಿನಲ್ಲಿ ಮಧ್ಯಾಹ್ನದಲ್ಲಿ ಅಲೆಯಲ್ಪಡುತ್ತದೆ" ಎಂಬ ವಿದೂಷಕನ ವಚನದಿಂದ ತಿಳಿಯಬೇಕಾಗುತ್ತದೆ. ಮಾತ್ರವಲ್ಲ, ನೆಳಲಿನಿಂದ ಕೂಡಿದ ಈ ಲತಾ ವಿತಾನದಲ್ಲಿ ನೀನು ಕುಳಿತುಕೋ, ನಾನೂ ಅನಂತರ ಸುಖೋಪವಿಷ್ಟನಾಗುತ್ತೇನೆ, ಎಂಬ ಈ ಮಾಢವ್ಯ ವಚನದಿಂದಲೂ ಒಳ್ಳೇ ಬಿಸಿಲಿನ ಸಮಯವೆಂದೇ ತಿಳಿಯಬೇಕಾಗುತ್ತದೆ. ದ್ವಿತಿಯಾಂಕದ ಕಥಾವಸಾನವು ಸಂಜೆಗೆ ಆಗಿದೆ. ಈ ವಿಷಯವನ್ನು "ಕುಲಪತಿಯಾದ ಕಣ್ವನ ಸಾನ್ನಿಧ್ಯವಿಲ್ಲದೆ ರಾಕ್ಷಸರು ಯಾಗಗಳಿಗೆ ವಿಘ್ನವನ್ನುಂಟುಮಾಡುತ್ತಾರೆ. ಆದುದರಿಂದ ಸಾರಥಿ ದ್ವಿತೀಯನಾದ ನೀನು ಕೆಲವು ರಾತ್ರಿಗಳಿದ್ದು ಆಶ್ರಮ ರಕ್ಷೆಯನ್ನು ಮಾಡಬೇಕು" ಎಂಬ ಮುನಿ ವಟುಗಳ ವಚನದಿಂದ ಊಹಿಸಬೇಕಾಗುತ್ತದೆ. ಮೂರನೆಯ ಅಂಕದ ಕಥೆಯೂ ಬಿಸಿಲಿನ ಸಮಯದ್ದು. "ಬಿಸಿಲಾದ ಸಮಯವನ್ನು ಲತಾಭವನಗಳಿಂದ ಕೂಡಿದ ಮಾಲಿನೀ ನದಿಯ ತೀರದಲ್ಲಿ

ಸಖೀಜನರಿಂದ ಕೂಡಿದವಳಾಗಿ ಶಕುಂತಳೆ ಕಳೆಯುವಳು" ಎಂಬ ರಾಜನ ವಚನದಿಂದ ದೃಢವಾಗುತ್ತದೆ. ಈ ಅಂಕದ ಕೊನೆಯಲ್ಲಿ "ಸಾಯಂಕಾಲದ ಇಷ್ಟಿಯನ್ನು ಸುರುಹಚ್ಚಲು ಹುತಾಶನಾದ ಅಗ್ನಿಗೆ ರಾಕ್ಷಸರು ಮುತ್ತುವರು" ಎಂಬ ವಿವರವೂ ಸಿಗುತ್ತದೆ. ಇಂತಿರುವುದರಿಂದ ಮೂರನೆಯ ಅಂಕದ ಕಥೆಯು ಎಷ್ಟು ಹೊತ್ತಿನದು ಎಂಬುದು ಸ್ಪಷ್ಟ. ನಾಲ್ಕನೆಯ ಅಂಕವು "ಒಂದು ಕಡೆ ಚಂದ್ರನು ಮುಳುಗುತ್ತಾನೆ. ಇನ್ನೊಂದೆಡೆ ಸೂರ್ಯನು ಉದಿಸುತ್ತಾನೆ" ಎಂಬ ಶಿಷ್ಯವಚನದಿಂದ ಯಾವ ಹೊತ್ತಿಗೆ ಆರಂಭವಾಗಿದೆ ಎಂದು ಬೇರೆ ಹೇಳಬೇಕಾಗಿದೆಯೇ? ದುಷ್ಯಂತನಿಗೆ ಹೇಳಬೇಕಾದ ಸಂದೇಶವಚನಗಳನ್ನು ಕ್ಷೀರವೃಕ್ಷದ ಛಾಯೆಯಲ್ಲಿದ್ದ ಕಣ್ವನು ಹೇಳಿದ್ದಾನೆ. ಒಂದೆಡೆ ಅವನಿಗೆ ಅನುಷ್ಠಾನಕ್ಕೂ ಸಮಯವು ಅತಿಕ್ರಮಿಸುತ್ತಿದೆ. ಹೀಗಿರುವ ಒಂದು ಚಿತ್ರವು ನಾಲ್ಕನೇ ಅಂಕದಲ್ಲಿ ಕಾಣಬರುವುದರಿಂದ ಸೂರ್ಯೋದಯಾದಾರಭ್ಯ ಬಿಸಿಲು ಚೆನ್ನಾಗಿ ಬರುವ ವರೆಗಿನ ವಿಷಯಗಳು ಅಡಗಿವೆ ಎಂದು ಹೇಳಬಹುದು. ಐದನೆ ಅಂಕದಲ್ಲಿ ಕಣ್ವಶಿಷ್ಯರು ಹಸ್ತಿನಾವತಿಗೆ ಮುಟ್ಟಿದ್ದಾರೆ. ರಾಜನು ರಾಜಕಾರ್ಯದಲ್ಲಿ ಆಸಕ್ತನಾಗಿರುವನು. ಶ್ರೌತವಿಧಿಯಿಂದ ಸೋಮರತನಿಗೆ ಕಣ್ವಶಿಷ್ಯರನ್ನು ಸತ್ಕರಿಸ ಹೇಳುವನು. ಕಣ್ವಶಿಷ್ಯರು ಗುರುಸಂದೇಶವನ್ನು ಮಾಡುವರು. ಪುನಃ ಆಶ್ರಮಕ್ಕೆ ಹಿಂತಿರುಗುವರು. ಎಂಬೀ ವಿಷಯಗಳು ಅಲ್ಲಿ ಸಿಗುವುದರಿಂದ ಮಧ್ಯಾಹ್ನ ನಂತರ ಸಾಮಾನ್ಯ ನಾಲ್ಕೂವರೆ ಗಂಟೆಯ ಒಳಗಿನ ಕತೆಯು ಇದರಲ್ಲಿದೆ ಎನ್ನಬೇಕು. ಆರನೆಯ ಅಂಕದಲ್ಲಿ ಧೀವರನ ವೃತ್ತಾಂತವಿದೆ. ಸಾನುಮತಿಯು ಅಪ್ಸರಸ್ತೀರ್ಥಸಾನ್ನಿಧ್ಯದಿಂದ ಬರುವಳು. ಚೂತಕಲಿಕಾಭಂಗವನ್ನು ಮಾಡಿ ದೇವತಾರ್ಚನೆಗೆ ಪ್ರತೀಹಾರಿಣಿಯರು ಆಸಕ್ತರಾಗುವರು ಹೀಗಿರುವ ಒಂದು ದೃಶ್ಯವು ಆರನೆಯ ಅಂಕಾರಂಭದಲ್ಲಿ ಕಾಣಬರುವುದರಿಂದ ಬೆಳಗ್ಗಿನ ಹೊತ್ತೆಂದೇ ಹೇಳಬೇಕು. ಮಾತ್ರವಲ್ಲ, ಶಕುಂತಲಾ ಶೋಕದಿಂದ ರಾಜ್ಯಭಾರವು ಮಂತ್ರಿಯಿಂದಲೇ ನಡೆಯಲಿ ಎಂದು ರಾಜನು ಹೇಳುವನು. ಇದರಿಂದ ಆರನೆ ಅಂಕದ ಕತೆಯು ಸಾಮಾನ್ಯ ಒಂಭತ್ತೂವರೆ ಇಲ್ಲವೇ ಹನ್ನೊಂದು ಗಂಟೆಯ ಮೊದಲಿನದು. ಏಳನೆಯ ಅಂಕದಲ್ಲಿ ಇಂದ್ರನಿಂದ ಬಹುಮಾನಿತನಾದ ದುಷ್ಯಂತನ ಪ್ರವೇಶ. ಮಂದಾರಮಾಲೆಯು ಅವನ ಕೊರಳಿಗೆ ಬಿದ್ದಿದೆ. ದೇವಲೋಕದಲ್ಲಿ ಒಂದು ಸಭೆ ಕಳೆದಿದೆ. ರಾಜನಿಗೆ ಮಾನಪತ್ರ ದಾನಾದಿಗಳೆಲ್ಲಾ ಆಗಿವೆ. ಮರೀಚನ ದರ್ಶನವಾಗುತ್ತಿದೆ, ಹೀಗಿರುವ ಸನ್ನಿವೇಶಗಳು ಏಳನೆಯ ಅಂಕದಲ್ಲಿ ಕಂಡುಬರುತ್ತಿವೆ. ಆದುದರಿಂದ

ಈ ಸಮಯವಾವುದೆಂದು ವಾಚಕರೇ ಊಹಿಸಿರಿ. ಈ ಹರಟೆಯನ್ನು ಇನ್ನು ಬಿಡೋಣ.



ಕಾಳಿದಾಸನ ಶಕುಂತಲೆ ಹತ್ತು ಸಾವಿರ ಮುನಿಗಳ ಒಡನಾಟದವಳು. ಆಶ್ರಮ ಪರಿಚರ್ಯೆಯವಳು. ಇಂತಹಳಿಂದ ಕಾಳಿದಾಸನಿಗೆ ಪತಿವ್ರತಾ ಧರ್ಮವನ್ನು ಬೋಧಿಸಬೇಕಾಗಿದೆ. ಪತಿಯು ಶಕುಂತಲೆಯನ್ನು ಬಿಟ್ಟಿದ್ದರೂ ಅವಳು ನಿಯಮದಲ್ಲಿದ್ದಳು. ದುಷ್ಯಂತನು ಶಕುಂತಲೆಯನ್ನು ಕಂಡಾಗ ವಸನಗಳು ದೂಸರಗಳಾಗಿದ್ದುವು. ಮುಖದ ಕಾಂತಿಯು ನಿಯಮದಿಂದ ಬಡವಾಗಿದೆ. ತಲೆಕೂದಲುಗಳು ಜಟೆಯ ಸಾದೃಶ್ಯವನ್ನು ಹೊಂದಿವೆ. ಪತಿವಿರಹದಿಂದ ಅಂಗಗಳೆಲ್ಲಾ ಬಡವಾಗಿದ್ದುವು. ಇಂತಹ ಧರ್ಮವನ್ನು ಅಲ್ಲಿನ ಶಕುಂತಲೆಯಲ್ಲಿ ಕಾಣುತ್ತೇವೆ. ಅಚ್ಚರೆಯ ಪುತ್ರಿಯು ಇಷ್ಟು ಶುದ್ಧ ನಿಯಮವುಳ್ಳವಳಾಗಿದ್ದಾಳೆ. ವಿಶ್ವಾಮಿತ್ರನ ಒಂದು ತೇಜಸ್ಸು ಅವಳಲ್ಲಿ ಬಂದಿದೆ. ರಾಜನು ಅವಳನ್ನು ಧಿಕ್ಕರಿಸಿದರೂ ತನ್ನ ದುರ್ದೈವವನ್ನು ಹಳಿದು ಕೊಂಡಿದ್ದಾಳೆ. ಪತಿಯಲ್ಲಿ ಪತ್ನಿಯು ವರ್ತಿಸಬೇಕಾದ ಧರ್ಮವನ್ನು ಬಿಡ ಲಿಲ್ಲ. ಹೆಚ್ಚೇನು, ಮುಳಿದಪತಿಗೆ ಮುಳಿಯಲಿಲ್ಲ. ಇದರಿಂದ ನಮ್ಮ ಭರತಖಂಡದ ಮಹಿಳೆಯರಿಗೆ ಮೇಲು ಪಂಙ್ತಿಯನ್ನು ಹಾಕಿದ್ದಾಳೆ. 'ನಯುಕ್ತಂ ಪರ ಕಳತ್ರ ದರ್ಶನಂ' 'ದಾರತ್ಯಾಗೀ ಭವವ್ಯಾಹೋ ಪರ ಸ್ತ್ರೀ ಸ್ಪರ್ಶಪಾಂಸುಲಃ' ಎಂಬಿತ್ಯಾದಿಗಳನ್ನು ಹೇಳಿದ ಕಾಳಿದಾಸನಿಗೆ ಪತಿಭಕ್ತಿ ಯನ್ನು ಹೇಳಬೇಕಾಗಿದೆ. ಇದಲ್ಲವೇ ಅವನ ಮುಖ್ಯ ಗುರಿ. 'ಹುತಾಶನ ಶ್ಚಂದನ ಪಂಕಶೀತಲಃ' ಎಂಬ ಸಮಸ್ಯೆಯನ್ನು 'ಪತಿವ್ರತಾ ಶಾಪಭಯೇನ ಶಂಕಿತ ಹುತಾಶನಶ್ಚಂದನ ಪಂಗಶೀತಲ' ಎಂದು ಪೂರಯಿಸಿದ ಕಾಳಿದಾಸನು ಇದನ್ನು ಮರೆಯುವನೇ?; ಈ ರೀತಿಯ ಸಂವಿಧಾನದ ಮೂಲಕ ನಾಟಕ ವನ್ನು ರಚಿಸುವಲ್ಲಿ ರಂಗ ರಚನೆಯ ಕಾಲ ಕಲಾ ನಿಪುಣತೆಯನ್ನು ಅಭಿವ್ಯಕ್ತಿ ಗೊಳಿಸಿ–ರೂಪಕಕ್ಕೆ ಬೇಕಾದ ಕಾಲಕಲೆಯ ಮಾರ್ಗದರ್ಶಕನಾಗಿದ್ದಾನೆ. ಇವನ ನಾಟಕಗಳೆಲ್ಲಾ ಇಂತಹವು.

---

## ವಿನಯ ಶೀಲನಾದ ಕಾಳಿದಾಸ

ಕವಿಗಳ ಗ್ರಂಥವನ್ನು ಅಧ್ಯಯನ ಗೆಯ್ದಾಗ ಆ ಕವಿಯ ಹೃದಯ ಧರ್ಮವೆಂತಹುದು? ಆತನ ಮನಸ್ಸು ಎಷ್ಟು ವಿಶಾಲ? ಆತನ ಜ್ಞಾನವೆಷ್ಟು ಅಗಾಧ? ಆತ್ಮ ಪ್ರತಿಷ್ಠೆಗಾಗಿ ಹೊರಟವನೇ? ಅಹಂಭಾವಿಯೇ? ಸಮಾಜ ಹಿತ ಸಾಧನೆಗಾಗಿ ಹೊರಟಿರುವನೇ? ಪಾಂಡಿತ್ಯ ಪ್ರದರ್ಶನೆಗೆ ಇಳಿದಿರುವನೇ? ಆಚರಣೆ ಎಂತಹುದು? ಆಚರಣೆಯಿರದ ನುಡಿಯೇ? ರಾಷ್ಟ್ರಕಲ್ಯಾಣಕ್ಕಿರುವ ಬೋಧೆಯನ್ನು ಕೊಟ್ಟಿರುವನೇ? ಜನತೆಗೆ ಪರಿಣಾಮಕಾರಿಯಾಗುವಂತೆ ನುಡಿದಿರುವನೇ? ಲೋಕಾನುಭವ ರಹಿತವಾದ ನುಡಿಯೇ? ತನ್ನವರು, ತನ್ನ ಮಂದಿಗಳು, ತನ್ನ ಮತದವರು, ಇವರನ್ನು ಮಾತ್ರ ಕಾಣುತಿದ್ದು ವಿಧರ್ಮಿಯರನ್ನು ಕೆಣಕಹೊರಟಿರುವನೇ? ನುಡಿವ ನುಡಿ ಮಧುರ ಹಾಗೂ ವಿನಮ್ರಭಾವನೆಯಿಂದ ಕೂಡಿ ಪರಿಣಾಮಕಾರಿಯಾದುದೇ? ಎಂಬಿತ್ಯಾದಿ ವಿಷಯಗಳು ಮನಸ್ಸಿಗೆ ಬಾರದುಳಿಯವು. ಕವಿ ವಿನಮ್ರ ರೀತಿಯಿಂದ ನುಡಿದು ಜನರನ್ನು ಒಲಿಯಿಸಿ ಕಾವ್ಯ ಸಂದೇಶವನ್ನು ಸಾರ ಹೊರಟರೆ ಅದು ಪರಿಣಾಮಕಾರಿಯಾಗುವುದು. ಅಧಿಕಾರ ವಾಣಿಯ ನುಡಿ ಬಂದರೆ ಅದನ್ನು ಬಲ್ಲವರೇ ಸಹಿಸಲು ಸಾಧ್ಯ. ಉಳಿದವರಿಗೆ ತಡೆಯಲಾರದು. ವೇದದ ವಚನ ಅಧಿಕಾರವಾಣಿ. ಇದರಿಂದಲೇ ಈ ಅಧಿಕಾರ ವಾಣಿಯ ಜ್ಞಾನಕ್ಕೆ ಎಲ್ಲಾ ಬಗೆಯವರಿಂದಲೂ ಸಾಧ್ಯವಿಲ್ಲ. ಕ್ಷಮಾ ಭೂಯಿಷ್ಠರಾದ ಸಾತ್ವಿಕ ಆಹಾರಿಗಳಿಗೆ ಮಾತ್ರ ಸಾಧ್ಯ. ವೇದವನ್ನು ಅಧ್ಯಯನ ಗೆಯ್ಯುವವರೆಲ್ಲರೂ ಇದರಿಂದಲೇ ಆಹಾರ ವ್ಯವಹಾರಗಳಲ್ಲಿ ನಿಷ್ಠೆಯುಳ್ಳವರಾಗುತ್ತಾರೆ. ಬ್ರಹ್ಮಚರ್ಯ ನಿಯಮ ವೇದ ಪಾಠಿಗಳಿಗೆ ಇದರಿಂದಲೇ ಬೇಕಾಗಿದೆ. ಪ್ರಾಚೀನರು ವಿದ್ಯೆಯನ್ನು ಅಧ್ಯಯನಗೆಯ್ಯುವ ವಿದ್ಯಾರ್ಥಿಗೆ ಕಾಮೋತ್ತೇಜಕ ಆಹಾರ ವಸ್ತು ಸಂಪರ್ಕಗಳ ನಿಷೇಧವನ್ನು ಮಾಡಿದ್ದಾರೆ. ವಿದ್ಯಾರ್ಥಿಯು ಕಾಮವಾಸನೆಯನ್ನು ಹೊಂದಿದರೆ ಆತನ ಜೀವನ ನಿರರ್ಥಕ. ಕಾಳಿದಾಸನು ತನ್ನ ಗ್ರಂಥದಲ್ಲಿ ಅಧಿಕಾರ ದರ್ಪಗಳ ನುಡಿಯನ್ನು ಹೇಳಿಲ್ಲ. ವಿನಮ್ರನಾಗಿ ಕೇಳಿ ಕೊಂಡಿರುತ್ತಾನೆ. ಕವಿಗಳಲ್ಲಿ ಅಧಿಕರಲ್ಲಿ ಹೆಮ್ಮೆ ತುಂಬಿರುತ್ತದೆ. ನಾಲ್ಕು ಅಕ್ಷರ ಬರೆಯ ಬಲ್ಲವರಾದರೆ ಸಾಕು. ದರ್ಪೋದ್ರೇಕಕ್ಕೆ ಇತಿ ಮಿತಿಗಳಿಲ್ಲ. ಪ್ರಾಚೀನ ಕವಿಗಳ ಶಿಲ್ಪಿಗಳ ರಚನೆ ಇಂದೂ ಅಮರ. ಅವರು ಮಾಡಿದ ರಚನೆ ದೇಶದ ಕೀರ್ತಿಯನ್ನು ವರ್ಧಿಸು

ವುದಕ್ಕೆ. ಈ ಕಾರಣದಿಂದ ಅವರು ಯಾರು? ರಚನೆಯ ಕಾಲವಾವುದು ಎಂಬುದನ್ನು ನಾವು ಅವರ ನಿಸ್ವಾರ್ಥ ಸೇವೆ ವಿನಮ್ರ ಭಾವನೆಗಳಿಂದ ತಿಳಿಯಲಾಗುವುದಿಲ್ಲ. ಅವರು ತಮ್ಮ ಹೆಸರು ಕಾಲಗಳನ್ನು ಇದರಿಂದಲೇ ಕೊಟ್ಟಿಲ್ಲ. ಇಂದಣ ಶಿಲ್ಪಿಗಳಿಗೆ, ಕವಿಗಳಿಗೆ, ಲೇಖಕರಿಗೆ ಇರುವ ಭಾವನೆ ಎಂತಹುದು? ಯಾರಾದರೂ ಒಂದು ಬರೆಹವನ್ನು ಕೇಳಿದರೆ ಹಣದ ಗಂಟಿನಿಂದ ತಮ್ಮ ಗೌರವವೆಂದು ಅದಕ್ಕಾಗಿ ಕಲೆಯನ್ನು ಮಾರುವರು. ಕಲೆಯು ಸೇವೆಗಾಗಿದ್ದರೆ ಮಾತ್ರ ಅದು ಸೌಂದರ್ಯಮಯವಾಗುವುದು. ಚೆಲುವಿನ ನೆಲೆ ಉಪಾಸನೆಯಲ್ಲಿ. ಇದನ್ನು ಕಾಳಿದಾಸ ಬಲ್ಲವನಿದ್ದಾನೆ. ಇದರಿಂದಲೇ ಆತನು ಅಭಿಜ್ಞಾನ ಶಾಕುಂತಲದಲ್ಲಿ

ಅವರಿತೋಷಾದ್ವಿದುಷಾಂ ನಸಾಧುಮನ್ಯೇಪ್ರಯೋಗವಿಜ್ಞಾನಂ।
ಬಲವದಪಿಶಿಕ್ಷಿತಾನಾಂ ಮಾತ್ಮನ್ಯಪ್ರತ್ಯಯಂಚೇತಃ॥

ಎಂದು ಹೇಳಿರುವನು. ತಾನು ಶಾಕುಂತಲಾ ನಾಟಕವನ್ನು ಬರೆದನು. ಬರೆದ ಬಳಿಕ ಆತನಿಗೆ ಅದು ಉತ್ತಮವಾಗಿದೆಯೋ ಇಲ್ಲವೋ ಎಂಬುದರಲ್ಲಿ ಸಂದೇಹ. ಪಂಡಿತರ ಸಂತೋಷದ ವಿನಾ ತನ್ನ ಈ ಪ್ರಯೋಗವಿಜ್ಞಾನವನ್ನು ಉತ್ತಮವಾಗಿದೆಯೆಂದು ತಿಳಿಯುವುದಿಲ್ಲ. ಅತಿ ವಿದ್ವಾಂಸರಿಗೂ ಸ್ವವಿಷಯದಲ್ಲಿ ಮನಸ್ಸು ಅವಿಶ್ವಾಸದಿಂದಲೇ ಕೂಡಿರುವುದು ಎಂದು ತನ್ನ ನಾಟಕವಿಚಾರವಾಗಿ ಹೇಳುತ್ತಿರುವನು. ಆತನು ಉತ್ತಮವಾದ ವಿಜ್ಞಾನರೂಪವಾದ ನಾಟಕ ಪ್ರಯೋಗವನ್ನು ಮಾಡಿದನು. ಆತನು ಮಾಡಿದ ಆ ಪ್ರಯೋಗ ಬಲ್ಲವರ ಮೆಚ್ಚುಗೆಗೆ ಪಾತ್ರವಾದರೆ ಮಾತ್ರ ಸಾಧುವೆನಿಸುವುದು. ಅಲ್ಲವಾದರೆ ಅದು ಉತ್ತಮವಾಯಿತೆನ್ನಲಾಗುವುದಿಲ್ಲ. ನಾಟಕ ಪ್ರಯೋಗಾಭಿಜ್ಞರೆನಿಸಿದ ಶಿಕ್ಷಿತರಿಗೆ ಅದೆಂದೂ ತಮ್ಮ ವಿಷಯದಲ್ಲಿ ನಂಬುಗೆ ಇಲ್ಲ ಎಂಬ ಈತನ ವಿನಮ್ರ ನುಡಿ ಕವಿಗಳೆಲ್ಲರಲ್ಲೂ ಇರತಕ್ಕ ಭಾವನೆ. ಎಲ್ಲಾ ಬಗೆಯ ಕಲಾವಿದರಲ್ಲೂ ಈ ಭಾವನೆ ಮುಖ್ಯ.

ರಘುವಂಶವನ್ನು ಕವಿ ಕಾಳಿದಾಸನು ಬರೆಯಲು ಹೊರಟನು. ಅದು ರಾಮಾಯಣಕ್ಕೆ ಸಂಬಂಧಿಸಿದ ಕಥಾವಸ್ತು. ರಘುವಂಶೀಯರ ಕೀರ್ತಿ ವಿಶಾಲ. ವಿಶಾಲವಾದ ಚರಿತ್ರೆ. ಅಂತಹ ವೀರ ನಾಯಕರ ವಂಶೀಯ ಚರಿತ್ರೆಯನ್ನು ಕಾವ್ಯ ರೂಪವಾಗಿ ಕಾಳಿದಾಸನು ಬರೆವಾಗ ತಾನು ಮಾಡುವ ಕೆಲಸ ಎಂತಹುದು, ಎಂದು ಆತನಿಗೆ ತಿಳಿದಿತ್ತು. ಆದ್ದರಿಂದ ಆತನು

ಕ್ವಸೂರ್ಯಪ್ರಭವೋವಂಶಃ ಕ್ವಚಾಲ್ಪವಿಷಯಾಮತಿಃ।
ತಿತೀರ್ಷುರ್ದುಸ್ತರಂಮೋಹಾ-ದುಡುಪೇನಾಸ್ಮಿಸಾಗರಂ॥

ಎಂದು ಹೇಳುತ್ತಾನೆ. "ಸೂರ್ಯ ವಂಶವೆಲ್ಲಿ. ನನ್ನ ಅಲ್ಪ ಜ್ಞಾನ ವೆಲ್ಲಿ. ಸಮುದ್ರವನ್ನು ಅಜ್ಞಾನದಿಂದ ಪ್ಲವದ ಮೂಲಕ ದಾಟಲು ಇಚ್ಛೆ ಯುಳ್ಳವನಾಗಿರುತ್ತೇನೆ". ಎಂದು ತನ್ನ ಕರ್ತವ್ಯದ ಕುರಿತು ಸಂಕೋಚ ಗೊಳ್ಳದೆ ವಿನಮ್ರ ರೀತಿಯಿಂದ ಹೇಳುತ್ತಿರುವನು.

ಮಂದಃ ಕವಿಯಶಪ್ರಾರ್ಥೀ ಗಮಿಷ್ಯಾಮ್ಯುಪಹಾಸ್ಯತಾಂ।
ಪ್ರಾಂಶುಲಭ್ಯೇ ಫಲೇ ಲೋಭಾದುದ್ಬಾಹುರಿವ ವಾಮನಃ॥

ನಾನು ಅಜ್ಞಾನಿ. ಕವಿಗಳ ಯಶಸ್ಸನ್ನು ಬಯಸುತ್ತಾ ನೀಳವಾದ ಆಳು ಹೊಂದಲು ಸಾಧ್ಯವುಳ್ಳ ಹಣ್ಣನ್ನು ಆಶೆಗೊಂಡು ಕೈ ಮೇಲಕ್ಕೆತ್ತಿ ಯತ್ನಿಸು ತ್ತಿರುವ ಕುಳ್ಳನಂತೆ ಅಪಹಾಸ್ಯಕ್ಕೆ ಈಡಾಗುವೆನೆ"ಂದು ತನ್ನ ಉದ್ಯಮದ ಕುರಿತು ವಿನಯದಿಂದ ಕಾಳಿದಾಸನು ಹೇಳುತ್ತಿರುವನು.

ಕವಿಗಳ ಕೆಲಸ ದೊಡ್ಡದು. ಕವಿಯ ಯಶಸ್ಸನ್ನು ಪಡೆವ ಹೆಮ್ಮೆ ಯಿಂದ ಈ ಗ್ರಂಥವನ್ನು ರಚಿಸುವುದಿಲ್ಲ. ಕವಿಯೆಂಬ ಯಶಸ್ಸನ್ನು ಪಡೆ ಯಲು ಉನ್ನತ ಜ್ಞಾನ ಬೇಕು. ಉನ್ನತ ಜ್ಞಾನವಿರದೆ ಈಗ ಮಾಡುತ್ತಿರುವ ಉದ್ಯಮ ನೀಳವಾದ ಆಳು ಹೊಂದತಕ್ಕ ಹಣ್ಣಿಗೆ ಕುಳ್ಳನು ಕೈನೀಡಿದಂತೆ. ಕವಿಯಾಗುವವನಿಗೆ ವಿಶಾಲ ಜ್ಞಾನ ಬೇಕು. ವಿಶಾಲವಾದ ಉನ್ನತ ಜ್ಞಾನ ವನ್ನು ಗ್ರಂಥದಲ್ಲಿ ಹೊರಗೆಡಹುವುದೇ ಕವಿಯ ಕಾರ್ಯ. ಈ ಕೆಲಸದಿಂದ ಸಮಾಜವು ಉನ್ನತಿಯನ್ನು ಹೊಂದಬೇಕು. ಅದಿರದೆ ಮಾಡಿದ ಕೆಲಸ ಎಟಕದ ಹಣ್ಣಿಗೆ ಕುಳ್ಳನು ಕೈನೀಡಿದಂತಾಗುವುದು. ಜನತೆಯ ಮುಂದೆ ಇಂತಹನು ಉಪಹಾಸಕ್ಕೆಡೆಗೊಳ್ಳುತ್ತಾನೆ. ಮಾತ್ರವಲ್ಲ ಕವಿಯೆಂಬ ನಾಮ ಕರಣಕ್ಕೆ ಯೋಗ್ಯವಾಗುವುದಿಲ್ಲವೆಂಬುದೇ ಇದರಿಂದ ತಿಳಿದು ಬರುವುದು. ಕಾಳಿದಾಸನು ತಾನು ಸೂರ್ಯ-ವಂಶದವರ ಚರಿತ್ರೆಯನ್ನು ಬರೆಯುವುದು ಆಳವಾದ ಗಹನತರ ಕೆಲಸ. ಆದರ್ಶ ಚರಿತ್ರೆಯನ್ನು ಚಿತ್ರಿಸುವ ಉದ್ದೇಶ ವಿನ್ನೂ ಅತಿ ಗಹನ. ಇಂತಹ ಕವಿ ವರ್ತನೆಗೆ ತಾನು ಹೊರಡುವೆನೆಂಬ ಧಾರ್ಷ್ಟ್ಯ ತನ್ನಲ್ಲಿಲ್ಲವೆಂದು ವಿನಯದಿಂದಲೇ ಹೇಳುತ್ತಿದ್ದಾನೆ.

ರಘುವಂಶವು ಎಷ್ಟು ಆದರ್ಶ ಚರಿತ್ರೆಯಿಂದ ಕೂಡಿದ್ದು? ರಾಮಾ ಯಣದಲ್ಲಿ ಕಾಣಬರುವ ವಸ್ತು ಎಂತಹುದು? ಭಾರತದ ಘನತೆ ರಾಮಾಯಣ ದಿಂದ ಉಂಟಾಗಿದೆ ವಾಲ್ಮೀಕಿ ಅಂತಹ ಆದರ್ಶ ಚರಿತ್ರೆಯನ್ನು ಕೊಟ್ಟು

ಅಮರನಾಗಿದ್ದಾನೆ. ಅವನ ಮುಂದೆ ಈ ನಡೆಸುತ್ತಿರುವ ಕೆಲಸ ಎಟಕದ ಹಣ್ಣಿಗೆ ಕುಳ್ಳನು ಕೈನೀಡುವಂತಹುದು. ರಾಮಾಯಣದ ವಾಲ್ಮೀಕಿಯು ಆ ಹೆಸರು ತನಗೆ ಒದಗುವಂತಿಲ್ಲ. ಆತನು ಹೆಸರು ತನಗೆ ಬೇಕೆಂಬ ಅಭಿಲಾಷೆ ಯಿಂದ ಇದನ್ನು ಬರೆಯ ಹೊರಟಿಲ್ಲ. ಆ ರಘುವಂಶೀಯರ ಕಥೆಯನ್ನು ಕೇಳಿ ಚಾಪಲಗೊಂಡು ಇದನ್ನು ಬರೆಯ ಹೊರಟಿರುವೆನು. ಸಜ್ಜನರು ಇದನ್ನು ಕೇಳಬೇಕು. ರಘು ಚರಿತ್ರೆ ಸ್ವರ್ಣಸಮಾನ. ಆ ಸ್ವರ್ಣಕ್ಕೆ ಏನಾದರೂ ದೋಷವು ಒದಗಿದೆಯೇ ಎಂಬುದನ್ನು ಜ್ಞಾನಾಗ್ನಿಯಿಂದ ಪರೀಕ್ಷಿಸಿರಿ. ಜ್ಞಾನಾಗ್ನಿಯಲ್ಲಿ ಪುಟಗೊಳಿಸಿದರೆ ಅದರ ದೋಷ ಕಾಣಬರುವುದೆಂದು ವಿನಮ್ರವಾಗಿ ಸೂಚಿಸುವುದರೊಂದಿಗೆ ಇದನ್ನೇ ಪದ್ಯ ರೂಪವಾಗಿ—

ತಂಸಂತಃ ಶ್ರೋತುಮರ್ಹಂತಿ ಸದಸದ್ವ್ಯಕ್ತಿ ಹೇತವಃ।
ಹೇಮ್ನಃ ಸಂಲ್ಲಕ್ಷ್ಯತೇ ಹ್ಯಗ್ನೌ ವಿಶುದ್ಧಿ ಶ್ಯಾಮಿಕಾಪಿವಾ॥

ಎಂದು ನಿವೇದಿಸಿಕೊಳ್ಳುತ್ತಾನೆ. ಕಾಳಿದಾಸನಿಗೆ ಕವಿಯೆಂಬ ಜ್ಞಾನಿ ಯೆಂಬ ಹೆಮ್ಮೆ ಸೋಂಕಿರಲಿಲ್ಲ. ಇದರಿಂದಲೇ ಹೀಗೆ ಹೇಳಿದನು.

ವಿಕ್ರಮೋರ್ವಶೀಯ ನಾಟಕವನ್ನು ಬರೆದು

ಪುರಾಣಮಿತ್ಯೆವ ನ ಸಾಧು ಸರ್ವಂ ನಚಾಪಿ ಕಾವ್ಯಂನವಮಿತ್ಯವದ್ಯಂ॥

ಎಂದು ಸಮಾಜದೊಡನೆ ಕೇಳಿಕೊಳ್ಳುತ್ತಿರುವನು. ಹಳತು ಎಂದು ಎಲ್ಲವೂ ಒಳ್ಳೆಯದಲ್ಲ. ಹೊಸತೆಂದು ಕಾವ್ಯವು ತಿರಸ್ಕರಣೀಯವೂ ಅಲ್ಲ. ತಮ್ಮ ಜ್ಞಾನದ ಒರೆಗಲ್ಲಿಗೆ ಹಚ್ಚಿ ತಿಳಿದುಕೊಳ್ಳಬೇಕು. ಬೇರೆಯವರ ಮಾತಿಗೆ ಮೋಸ ಹೋಗ ಬಾರದು. ತಿಳಿವಿನಿಂದ ಪರೀಕ್ಷಿಸಿ ಕಾವ್ಯದ ಮಹತ್ವವನ್ನು ತಿಳಿಯಬೇಕು. **"ಮೂಢ ಪರ ಪ್ರತ್ಯಯನೇಯ ಬುದ್ಧಿಃ"** ಅಜ್ಞಾನಿ ಬೇರೆಯವರೆಂದಂತೆ ನಡೆವನು. ಸಾಮಾಜಿಕರು ಕಾವ್ಯವನ್ನು ಓದಿ ತಿಳಿದು ಅದರ ಗೌರವವನ್ನು ಕಾಣಬೇಕು. ಅಲ್ಲದೆ ಕವಿಯ ಹೆಸರನ್ನು ಕೇಳಿ ಪ್ರಶಂಸಿಸುವುದು ಯುಕ್ತವಲ್ಲ. ಇಂದೂ ಕೂಡ ಈ ಧರ್ಮ ಜನರಲ್ಲಿರ ಬೇಕಿದೆ. ನವ ಲೇಖಕರ ಬರೆಹವನ್ನು ಓದಿ ಅವರ ಲೇಖನಕ್ಕೆ ಮೌಲ್ಯ ವನ್ನು ಕೊಡಬೇಕು. ಅದಿಲ್ಲದೆ ಹೆಸರಾಂತ ಲೇಖಕರ ಲೇಖವೆಂದು ಕಣ್ಣು ಮುಚ್ಚಿ ಸಹಿ ಹಾಕುವುದು ಯುಕ್ತವಲ್ಲ. ಈ ವಿಚಾರವನ್ನು ಸೂಚಿಸುವಲ್ಲಿ ಯೂ ಕಾಳಿದಾಸನು ತನ್ನ ವಿನಮ್ರ ವರ್ತನೆಯನ್ನು ಬಿಟ್ಟಿಲ್ಲ. ಇದರಿಂದ ಆತನು ಗೌರವಕ್ಕೆ ಕಾರಣನೆನಿಸಿದ್ದಾನೆ. ಲೇಖಕರಲ್ಲಿ ಈ ವಿನಯ ಬೇಕು.

# ಸೀತೆಯ ಘನತೆಯನ್ನು ಚಿತ್ರಿಸುವ ಕಾಳಿದಾಸ

ಅಹಲ್ಯಾ ದ್ರೌಪದೀ ಸೀತಾ ತಾರಾ ಮಂಡೋದರೀ ತಥಾ॥
ಪಂಚಕಂ ನಾಃ ಸ್ಮರೇನ್ನಿತ್ಯಂ ಮಹಾಪಾತಕ ನಾಶನಂ॥

ಅಹಲ್ಯೆ, ದ್ರೌಪದಿ, ಸೀತೆ, ತಾರೆ, ಮಂಡೋದರಿ, ಈ ಐದು ಮಂದಿಗಳನ್ನು ಪುರುಷನು ಎಂದೂ ಸ್ಮರಿಸುತ್ತಿರಬೇಕು. ಅದರಿಂದ ಮಹಾಪಾತಕದ ಅಳಿವುಂಟಾಗುವುದು ಎಂದು ಪ್ರಾಚೀನರು ಹೇಳಿರುವರು. 'ಪಂಚಕನ್ಯಾ' ಎಂದು ತಪ್ಪಾದಪಾಠಾಂತರವನ್ನು ಇಲ್ಲಿ ಹೇಳುತ್ತಿರುವರು. ಇವರು ಕನ್ನಿಕೆಯರಲ್ಲ, ಕನ್ನಿಕೆಯರು ಇವರನ್ನು ಸ್ಮರಿಸತಕ್ಕುದು ಎಂಬ ಅರ್ಥವೂ ಅಲ್ಲ. ನಾಃ ನರೌಃ ನರಃ ಎಂಬ ಪುರುಷವಾಚಕ ಶಬ್ದ ಇಲ್ಲಿರಬೇಕಿದೆ. ಭಾರತ ಜನಾಂಗಕ್ಕೆ ವ್ಯಭಿಚಾರದ ಪರಸ್ತ್ರೀ ಕಾಮುಕತನದಿಂದ ಆವ ಪರಿಣಾಮವು ಉಂಟಾಗುವುದು, ಆ ಮಹಾ ಪಾತಕವನ್ನು ಮಾಡಿದ ದುರ್ವರ್ತನೆಯನ್ನು ಗೆಯ್ದ ಮಂದಿಗಳಿಗೆ ಆವ ಶಿಕ್ಷೆಯುಂಟಾಗಿದೆ ಎಂಬುದನ್ನು ಪುರುಷನು ಎಣಿಸಿದರೆ ಆತನು ಆ ಕೊಳೆಗೆಲಸದಿಂದ ತಪ್ಪುವನು. ಮಹಾ ಪಾತಕವನ್ನು ಮಾಡಲಾರನು. ಅದರ ಎಚ್ಚರಕ್ಕೆ ಐವರನ್ನು ಸ್ಮರಿಸಿದರೆ ಸಾಕೆಂಬ ಆಳವಾದ ವಿಚಾರ ಇಲ್ಲಿದೆ. ಅಹಲ್ಯೆಯನ್ನು ಭೋಗಿಸಿದ ಇಂದ್ರನೇನಾದ? ದ್ರೌಪದಿಯ ಮಾನ ಭಂಗಕ್ಕೆ ಹೊರಟ ಧುರ್ಯೋಧನನ ಗತಿ ಏನಾಯಿತು? ಎಂದಿತ್ಯಾದಿಯಾಗಿ ಪುರುಷನು ವಿವೇಕಗೊಂಡಕೆ ಆತನು ತನ್ನ ಉದ್ಧಾರಕ್ಕಿರುವ ಗತಿಗೊಳ್ಳುವನು ಎಂಬ ಬೋಧಾ ರೂಪದ ಸಂದೇಶ ಇಲ್ಲಿದೆ.

ಸೀತೆಯು ಜನಕ ನಂದಿನಿ. ಜನಕ ಹೆಸರಾದ ರಾಜರ್ಷಿ. ಗಾರ್ಗೇಯಿ ಈತನಲ್ಲಿ ವಾದ ವಿವಾದವನ್ನು ನಡಿಸಿರುವಳು. ಗೆದ್ದಿರುವಳು. ಅಂದು ಸ್ತ್ರೀ ಶಿಕ್ಷಣವು ಇದ್ದು ಸ್ತ್ರೀ ಸಮಾಜದ ನೆಲೆ ಉನ್ನತಾವಸ್ಥೆಯಲ್ಲಿದ್ದಿತು. ಸೀತೆ ಶಿಕ್ಷಿತಳಾದ ಕನ್ನೆ ಆಕೆ ನಾರೀ ಧರ್ಮವನ್ನು ತಿಳಿದಿದ್ದಾಳೆ. ಸಮಾಜ ಧರ್ಮವನ್ನು ಸಂರಕ್ಷಿಸ ಹೊರಟಿದ್ದಾಳೆ. ರಾಮನು ಅಗಸನ ನುಡಿಗೆ ಆಕೆಯನ್ನು ರಾಜ್ಯದಿಂದ ನಿರ್ವಾಸಿತಗೊಳಿಸಿದನು. ಸೀತೆ ಆಗ ತಾನು ರಾಜ ಮಹಿಷಿಯಾಗಿ ಉತ್ತರವನ್ನು ಕೊಡಹೊರಟರೆ ಉಳಿದ ನಾರಿಯರು ತಮ್ಮ ಪತಿಯರನ್ನು ಧಿಕ್ಕರಿಸುವರೆಂದು ಮೌನ ಹಿಡಿದಿದ್ದಾಳೆ. ಆ ಲೋಕಾಪವಾದ ಇದಕ್ಕಿಂತಲೂ ಹಿರಿದು ಎಂದು ಮನಗಂಡು ಆದರ್ಶವನ್ನು ತೋರಿದ್ದಾಳೆ. ಲಕ್ಷ್ಮಣನು ಕಾಡಲ್ಲಿ ಸೀತೆಯನ್ನು ತಂದು ಬಿಟ್ಟನು. ಎಲ್ಲಾ

ವಿವರವನ್ನು ಆಕೆಗೆ ನುಡಿದನು. ಆಗ ಆಕೆ ನಿಶ್ಚೇಷ್ಟಳಾದಳು. ಲಕ್ಷ್ಮಣನು ಆಕೆಯನ್ನು ಉಪಚರಿಸಿದನು. ಎಚ್ಚರಗೊಂಡ ಆಕೆಯು ಆತನೊಡನೆ ನುಡಿಯತೊಡಗಿದಳು.

ನಚಾವದದ್ಭರ್ತುರವರ್ಣ ಮಾರ್ಯಾ ನಿರಾಕರಿಷ್ಣೋರ್ವೃಜಿನಾದೃತೇಪಿ।
ಆತ್ಮಾನಮೇವ ಸ್ಥಿರ ದುಃಖ ಭಾಜಂ ಪುನಃ ಪುನಃದುಷ್ಕೃತಿನಂ ನಿನಿಂದ॥

ಎಂದು ಸೀತೆಯ ಘನತೆಯನ್ನು ಕಾಳಿದಾಸನು ಚಿತ್ರಿಸತೊಡಗುವನು. ಪಾಪ ವರ್ತನೆಯಿರದೆ ನಿರಾಕರಿಸುವ ಗಂಡನ ವಿಷಯವಾಗಿ ಒಂದು ಅಪಶಬ್ದವನ್ನೂ ಕೂಡ ಎತ್ತಲಿಲ್ಲ. ಅವಳು ತಾನೇ ಸ್ಥಿರ ದುಃಖಕ್ಕೆ ಭೂತಳೆಂದು ತಿಳಿದು ತನ್ನನ್ನೇ ಪುನಃ ಪುನಃ ಹಳಿಯತೊಡಗಿದಳು ಎಂದು ಕಾಳಿದಾಸನು ಹೇಳುವನು. ತನ್ನ ಪ್ರಾರಬ್ಧವು ಹಿರಿದಾಗಿರಲು ಯಾರಿಂದ ಏನು ಮಾಡಬರುವುದು ಎಂದು ಮನದಲ್ಲೇ ಸಮಾಧಾನಗೊಂಡು ತನ್ನನ್ನೇ ಹಳಿದುಕೊಳ್ಳುತ್ತಿರುವ ಸೀತೆಯೊಡನೆ ಲಕ್ಷ್ಮಣನು ತನ್ನ ತಪ್ಪನ್ನು ಕ್ಷಮಿಸೆಂದು ಬೇಡಿಕೊಂಡನು. ಆಗ ಸೀತೆ

ಸೀತಾ ತಮುತ್ಥಾಪ್ಯ ಜಗಾದ ವಾಕ್ಯಂ ಪ್ರೀತಾಸ್ಮಿತೇ ಸೌಮ್ಯ ಚಿರಾಯು ಜೀವ
ಬಿಡೌಜಸಾ ವಿಷ್ಣುರಿವಾಗ್ರಜೇನ ಭ್ರಾತ್ರಾ ಯದಿತ್ಥಂ ಪರವಾನಸಿ ತ್ವಂ

ಈ ರೀತಿಯಿಂದ ಲಕ್ಷ್ಮಣನನ್ನು ಸಮಾಧಾನ ಪಡಿಸಿದಳೆಂದು ಕಾಳಿದಾಸನು ಹೇಳುತ್ತಾನೆ. ಸೀತೆ ಬಾಗಿದ ಲಕ್ಷ್ಮಣನನ್ನು ಎತ್ತಿ ಹಿಡಿದಳು. "ಎಲೆ ಸೌಮ್ಯನೇ, ಚಿರಾಯುಷ್ಮಂತನಾಗು. ನಿನ್ನಲ್ಲಿ ಪ್ರೀತಿಗೊಂಡವಳಿರುತ್ತೇನೆ. ನೀನು ಇಂದ್ರನ ತಮ್ಮ ವಿಷ್ಣುವಿನಂತೆ ಅಣ್ಣನಿಂದ ಪರತಂತ್ರನಾಗಿರುವೆ" ಎನ್ನುವಳು. ಪರತಂತ್ರರಲ್ಲಿ ಕೃತ್ಯಾಕೃತ್ಯ ವಿವೇಕಕ್ಕೆ ಆಸ್ಪದವಿಲ್ಲ. ಆಜ್ಞಾನುವರ್ತಿಗಳಾಗಿರುವುದೇ ಮುಖ್ಯ. ಅದನ್ನು ಮಾಡಿದ ನಿನ್ನ ವಿಷಯದಲ್ಲಿ ರೇಗುವುದಾದರೂ ಏಕೆ? ಎಂದು ಉತ್ತರಿಸಿಯೇ ಬಿಟ್ಟಳು. ಅದಲ್ಲದೆ ನೀನು ಪುನಃ ಅಯೋಧ್ಯೆಗೆ ತೆರಳಿ ನನ್ನ ಮನವಿಯನ್ನು ಮಾಡಿಕೊಳ್ಳತಕ್ಕದ್ದಿದೆ. ಅದು ಇದೆಂದು ಆಕೆ ಹೇಳುತ್ತಿರುವ ಮಾತು ಅತಿ ಘನವಾದುದು.

ಶ್ವಶ್ರೂಜನಂ ಸರ್ವಮನುಕ್ರಮೇಣ ವಿಜ್ಞಾಪಯ ಪ್ರಾಪಿತಮತ್ಪ್ರಣಾಮಃ।
ಪ್ರಜಾನಿಷೇಕಂ ಮಯಿವರ್ತಮಾನಂ ಸೂನೋರನುಧ್ಯಾಯತ ಚೇತಸೇತಿ ॥

ಎಲ್ಲಾ ಅತ್ತೆಯರಿಗೂ ನನ್ನ ನಮಸ್ಕಾರವನ್ನು ಕ್ರಮವಾಗಿ ಸಲ್ಲಿಸು. 'ಆ ಮೇಲೆ ನನ್ನಲ್ಲಿರುವ ಭಾವಿಯ ಸಂತಾನದ ಕುರಿತು ಮಂಗಳಾಶಂಸೆಯನ್ನು ಧ್ಯಾನಿಸುವಂತೆ ವಿಜ್ಞಾಪಿಸು' ಎಂದು ಆಕೆ ಹೇಳುತ್ತಿರುವಳು. ಇಲ್ಲಿ ಕವಿ

ಕಾಳಿದಾಸನು ಆಕೆಯ ಘನತೆಯನ್ನು ಹೆಚ್ಚಿಸಿದ್ದಾನೆ. ಹೆಣ್ಣು ಗರ್ಭಿಣಿ. ಭಾವಿಯ ಮಕ್ಕಳನ್ನು ಕಾಣಲಿರುವ ಹಂಬಲು ಹೆಣ್ಣೊಡಲಿಗಿದೆ. ಹೆಂಗರುಳು ಮಕ್ಕಳ ಕುರಿತು ಸದಾ ಕಷ್ಟಪಡುತ್ತಿರುವುದು. ದ್ರೌಪದಿಯು ತನ್ನ ಮಕ್ಕಳು ಅಳಿದಾಗ ಕೃಪೆಯನ್ನು ನೆನೆದು ಅಶ್ವತ್ಥಾಮನನ್ನು ಹಾಗೆ ಬಿಡ ಹೇಳಿದ್ದಾಳೆ. ಅಂತಹುದು ಹೆಂಗರುಳು. ರಾಜ ಮಾತೆಯರಿಗೂ ಮಕ್ಕಳನ್ನು ಕಾಣುವ ಹಂಬಲವಿರುತ್ತದೆ. ಮುಂದಾಗಲಿರುವ ಮಕ್ಕಳ ಶ್ರೇಯಸ್ಸನ್ನು ತಾವು ಧ್ಯಾನಿಸಿರಿ ಎಂದು ಸೀತೆ ವಿನಮ್ರ ಭಾವನೆಯಿಂದ ಹೇಳುತ್ತಿದ್ದಾಳೆ. ಈ ಮಾತನ್ನು ಕೇಳಿದಾಗ ಆ ರಾಜ ಮಾತೆಯರಿಗೆ ಹೃದಯದಲ್ಲೇನಾಗದು?

ವಾಚ್ಯಸ್ತ್ವಯಾ ಮದ್ವಚನಾತ್ಸರಾಜಾ ವಹ್ನೌ ವಿಶುದ್ಧಾಮಪಿ ಯತ್ಸಮಕ್ಷಂ।
ಮಾಂ ಲೋಕವಾದ ಶ್ರವಣಾದಹಾಸೀ ಶ್ರುತಸ್ಯ ಕಿಂ ತತ್ಸದೃಶಂ ಕುಲಸ್ಯ॥

ಈ ಮಾತು ಸೀತೆಯದೇ: 'ಎಲೆ ಲಕ್ಷ್ಮಣ! ಆ ರಾಜನಿಗೆ ನೀನು ಹೀಗೆ ಹೋಗಿ ಹೇಳು. ಅಗ್ನಿ ಶುದ್ಧೆಯಾದ ನನ್ನನ್ನು ಕಣ್ಣಮುಂದೆ ಕಂಡು ಲೋಕಾಪವಾದಕ್ಕಾಗಿ ಬಿಟ್ಟುದು ಹೆಸರುಗೊಂಡ ಕುಲಕ್ಕೆ ಯೋಗ್ಯವಾದುದೇ?' ಎಂಬ ಈ ಮಾತಿನಲ್ಲಿ ಸೀತೆಯ ಘನತೆಯು ಕಂಡು ಬರುವುದು. 'ಹೆಸರುಗೊಂಡ ಕುಲಕ್ಕೆ ಈ ಕೆಲಸ ಒಪ್ಪಿಗೆಗೊಂಡುದೇ?' ಎಂಬ ಮಾತು ಎಷ್ಟು ವಿಶಾಲ! ಹೇಗಿರುವುದಾದರೂ ಈ ಮಾತಿಗೆ ಆಕೆಯೇ ಉತ್ತರವನ್ನು ಹೇಳುತ್ತಾ ಲಕ್ಷ್ಮಣನಿಗೆ ಹೇಳುವಳು.

ಕಲ್ಯಾಣ ಬುದ್ಧೇರಥವಾ ತವಾಯಂ ನ ಕಾಮ ಚಾರೋಮಯಿ ಶಂಕ ನೀಯಃ।
ಮಮೈವ ಜನ್ಮಾಂತರ ಪಾತಕಾನಾಂ ವಿಪಾಕ ವಿಸ್ಫೂರ್ಜಥುರಪ್ರಸಹ್ಯಃ॥

'ರಾಮನು ಲೋಕ ಕಲ್ಯಾಣ ಬುದ್ಧಿ. ಲೋಕ ಕಲ್ಯಾಣ ಸಾಧನೆಯ ತೃಷ್ಣೆ ತುಂಬಿರುವ ನಿನ್ನ ಮೇಲೆ ಈ ತ್ಯಾಗ ಸ್ವೇಚ್ಛಾಚಾರವೆಂದು ಶಂಕಿಸತಕ್ಕುದಲ್ಲ, ನನ್ನದೇ ಪ್ರಾಗ್ಜನ್ಮದ ಪಾತಕದ ಪಾಪ ಫಲ ರೂಪವಾದ ಸಹಿಸಲಾರದ ಸಿಡಿಲ ಹೊಡೆತವಿದು ಎಂದು ಹೇಳು' ಎಂಬಲ್ಲಿ ಕಾಣಬರುತ್ತಿರುವ ಸೀತೆಯ ಹೃದಯ ವೈಶಾಲ್ಯವೆಷ್ಟು! ರಾಮನು ಲೋಕ ಕಲ್ಯಾಣಕ್ಕಾಗಿಯೇ ಹೊರಟಿದ್ದಾನೆ. ದೇಶ ಪ್ರೇಮಿಯಾಗಿದ್ದಾನೆ. ದೇಶ ಕಲ್ಯಾಣದ ದುಡಿತ ಆತನಿಂದ ನಡೆಯುತ್ತಿದೆ. ಈ ಸಾಧನೆಯ ಆತನಿಗೆ ಲೋಕವೇ ದೊಡ್ಡದು. ಅದೇ ಆತನ ಉಪಾಸನಾವಸ್ತು. ದೇಶ ಕಲ್ಯಾಣ ಸಾಧನೆಯನ್ನು ಹೊತ್ತು ಹೆಂಡತಿಯನ್ನು ಬಿಟ್ಟಿರುವುದು ಸ್ವೇಚ್ಛಾಪ್ರವೃತ್ತಿಯೆನ್ನಲಾಗುವುದಿಲ್ಲ. ದೇಶದ ದುಡಿತಕ್ಕೆ ಗಂಡನು ನೆರವಾಗಿದ್ದಾಗ ಕಾಮಭೋಗ ಉದ್ದೇಶಗೊಂಡು ಹೆಂಗುಸು

ತಡೆಯ ಹೊರಡುವುದು ನ್ಯಾಯ ಧರ್ಮವಲ್ಲ. ದೇಶದ ಹಿತ ಸಾಧನೆಗಾಗಿ ಗಂಡನು ದುಡಿಯುವುದು ಹಿತ. ಅದು ಸ್ವೇಚ್ಛಾವರ್ತನೆಯೆಂದು ನಾರಿಯರು ತಿಳಿಯ ಕೂಡದು. ಗಂಡನ ಮೇಲೆ ಇದಕ್ಕಾಗಿ ಆರೋಪವನ್ನು ಹೊರ ಕೂಡದು. ಆದರೆ ಸೀತೆಗೆ ಉಂಟಾದ ಅಪವಾದ ಮುಜ್ಜನ್ಮದ ಪಾಪರೂಪ ವಾದ ಸಿಡಿಲ ಮೊಳಗು ಇದು ಪ್ರಾಚೀನ ಪಾಪರೂಪವಾದ ಸಿಡಿಲ ಮೊಳಗು, ಈ ಮೊಳಗು ಇಂತೆಸಗಿದೆ. ಸಿಡಿಲು ಮೊಳಗಿದಾಗ ಅದನ್ನು ಯಾರು ತಡೆ ಯಲಾಪರು? ಎಂದು ಆಕೆಯೇ ಸಮಾಧಾನ ರೂಪವಾಗಿ ನಿವೇದಿಸು ವಂತೆ ಮಾಡಿ ಸೀತೆಯ ಘನತೆಯನ್ನು ತೋರಗೊಟ್ಟಿದ್ದಾನೆ ಕಾಳಿದಾಸನು.

ಸೀತೆಯು ತನ್ನ ಘನತೆಯನ್ನು ತೋರುವುದರೊಂದಿಗೆ ಕೊನೆಗೆ ತನ್ನ ಜೀವನ ಸಾಧನೆಯ ವಿಚಾರವನ್ನು ಲಕ್ಷ್ಮಣನೊಡನೆ ಹೇಳುವಳು. ಆ ಮಾತುಗಳು ಇನ್ನೂ ಘನ ಶಕ್ತಿಗೂಡಿವೆ.

ಸಾಹಂ ತಪಃ ಸೂರ್ಯನಿವಿಷ್ಟ ದೃಷ್ಟಿ ರೂರ್ಧ್ವಂಪ್ರಸೂತೇ ಚರಿತುಂ ಯತಿಷ್ಯೇ
ಭೂಯೋ ಯಥಾ ಮೇ, ಜನನಾಂತರೇಪಿ ತ್ವಮೇವ ಭರ್ತಾನ ಚ ವಿಪ್ರಯೋಗಃ।

ನಾನು ಪ್ರಸವಾನಂತರ ಸೂರ್ಯನಲ್ಲಿ ಕಣ್ಣಿರಿಸಿ ತಪಸ್ಸಾಧನೆಯನ್ನು ಮಾಡಲು ಯತ್ನಿಸುವೆನು. ಆ ತಪಸ್ಸಿನಿಂದ ನೀನೇ (ರಾಮನೇ) ಜನ್ಮಾಂತರ ದಲ್ಲೂ ಪತಿಯಾಗಿ ಅಗಲುವಿಕೆಯು ಮುಂದುಂಟಾಗದಂತೆ ತಪಶ್ಚರಣೆಯನ್ನು ಮಾಡುತ್ತಿರುವೆನು' ಎಂದು ತಿಳಿಸೆಂದು ಹೇಳುವ ಈ ಆರ್ಯ ಮಹಿಳೆಯ ಸಂಸ್ಕೃತಿಯು ಎಷ್ಟು ಘನತರ! ಕಾಳಿದಾಸನು ಸೀತೆಯ ಘನತೆಯನ್ನು ಹೇಳು ವುದರೊಂದಿಗೆ ಭಾರತೀಯ ನಾರೀ ಸಂಸ್ಕೃತಿಯ ಎರಕವನ್ನು ಹೊಯ್ದಿದ್ದಾನೆ. ಈ ಎರಕ ಕವಿಗಳ ಗ್ರಂಥವನ್ನು ಅಭ್ಯಾಸ ಮಾಡಿದಲ್ಲಿ ಕಾಣಬರುವುದು.

ನೃಪಸ್ಯ ವರ್ಣಾಶ್ರಮ ಪಾಲನಂ ಯ-ತ್ಸ ಏವ ಧರ್ಮೋಮನುನಾ ಪ್ರಣೀತ
ನಿರ್ವಾಸಿತಾಪ್ಯೇವ ಮತಸ್ತ್ವಯಾಹಂ ತಪಸ್ವಿ ಸಾಮಾನ್ಯಮವೇಕ್ಷಣೀಯಾ॥

ಕೊನೆಗೆ ಈ ಮಾತನ್ನು ರಾಮನಿಗೆ ಹೇಳುವಂತೆ ಲಕ್ಷ್ಮಣನೊಡನೆ ಹೀಗೆ ಬಿನ್ನವಿಸಿಕೊಂಡಿದ್ದಾಳೆ. "ವರ್ಣಾಶ್ರಮ ಪಾಲನೆ ರಾಜನ ಧರ್ಮ. ಅದು ಮನುವಿನಿಂದ ಹೇಳಲಾಗಿದೆ. ಆ ಕಾರಣದಿಂದ ನಿನ್ನಿಂದ ನಾನು ರಾಜ್ಯದಿಂದ ದೂರಗೊಳಿಸಿರುವೆನಾದರೂ ತಪಸ್ವಿಗಳನ್ನು ಸಾಮಾನ್ಯವಾಗಿ ಕಾಣುವಂತೆ ಕಾಣತಕ್ಕದ್ದು ಎಂದು ಎಚ್ಚರಿಸಯೇ ಬಿಡುವಳು. ನನ್ನನ್ನು ತಪಸ್ವಿಗಳಂತೆ ಕಾಣಬೇಕು. ಹೆಂಡತಿಯಂತೆ ಮುಂದೆ ಕಾಣಕೂಡದು. ಹೆಂಡತಿಯೆಂಬ ಭಾವನೆ ನಿನಗಿರಕೂಡದು. ನಾನೊಬ್ಬಳು ತಪಸ್ವಿನಿ. ಇದಿಷ್ಟನ್ನೇ ತಿಳಿ

ಎಂದು ಎಚ್ಚರಿಸುವ ನುಡಿ ಎಷ್ಟು ಆಳವಾಗಿದೆ. ಸೀತೆ ಭಾರತ ಮಾತೆಯು
ರಲ್ಲಿ ತಪಸ್ವಿನಿಯೇ ಆಗಿದ್ದಾಳೆ ಈ ಘನತೆಯನ್ನು ಕಾಳಿದಾಸನು ರಘು
ವಂಶದಲ್ಲಿ ರೂಪಿಸಿದ್ದಾನೆ. ಈ ರೂಪಣೆ ಅತಿ ಹೃದ್ಯವಿದ್ದು ಉಚಿತವಾಗಿದೆ
ಪ್ರಶಂಸನೀಯುವಿದೆ.



## ರಥವೇಗದಿಂದ ಕಥಾವಸ್ತುವನ್ನು ಚಿತ್ರಿಸುವ ಕಾಳಿದಾಸ

ಕವಿಗಳ ಕಾವ್ಯದಲ್ಲಿ ಧ್ವನಿಯೆಂಬ ಒಂದು ವಸ್ತುವಿದೆ. ಇದು ಕಾವ್ಯದ ಬೆಲೆಯನ್ನೂ ಗೌರವವನ್ನೂ ಹೆಚ್ಚಿಸುವಂತಹುದು. ಒಂದು ವಿಚಾರವನ್ನು ನುಡಿವುದರೊಂದಿಗೆ ಹಲವು ವಿಷಯಗಳ ವಿಚಾರ ಆ ನುಡಿಯಲ್ಲಿ ಸೇರುತ್ತಿರುವುದು. ಧ್ವನಿಯೆಂಬುದು ಶ್ಲೇಷೆಯಲ್ಲ. ಶ್ಲೇಷಕ್ಕೂ ಧ್ವನಿಗೂ ತುಂಬಾ ಅಂತರವಿದೆ. ಶ್ಲೇಷವು ಶಬ್ದಾರ್ಥವನ್ನು ಹೊಂದಿದೆ. ನಾನಾರ್ಥ ಸಂಶ್ರಿತವಾದುದೇ ಶ್ಲೇಷ. ವರ್ಣ್ಯ ಅವರ್ಣ್ಯ ವಸ್ತುಗಳಿಗೆ ಹೊಂದಿ ಈ ಶ್ಲೇಷ ಸೇರುತ್ತಿದೆ. ಧ್ವನಿಯು ಒಂದು ವಸ್ತು ಸಾಧರ್ಮ್ಯವನ್ನು ಕೊಟ್ಟು ಇನ್ನೊಂದು ವಸ್ತುವಿನ ಹೊಳೆಯುವಿಕೆಗೆ ಆಶ್ರಯವನ್ನು ಕೊಡುತ್ತದೆ. ಕಾವ್ಯಕ್ಕೆ ಉಪಯೋಗಿಯಾಗಿದ್ದು ಅದರ ಮಹತ್ವ ಹೆಚ್ಚುತ್ತದೆ.

ಕವಿರಾಜ ಮಾರ್ಗಕಾರನು 'ಧ್ವನಿಯೆಂಬುದು ಅಲಂಕರಣ ಎಂದು ಹೇಳುತ್ತಾನೆ. ಧ್ವನಿಯು ವಸ್ತುವಿನ ಶಕ್ತಿ ಗೌರವಗಳನ್ನು ತೋರಿಸುವುದು. ಶಂಖವು ಮೊಳಗಿ ಧ್ವನಿಗೊಳ್ಳುತ್ತಿದೆ. ಆ ಧ್ವನಿ ಗಗನ ಮಂಡಲದಲ್ಲಿ ಆವರಿಸುತ್ತಿದೆ. ಆವರಿಸಿದಾಗ ದೇಗುಲದಲ್ಲಿ ಪೂಜೆಯು ನಡೆಯುತ್ತಿರುವುದು. ದೇಗುಲದ ಮಂದಿಗಳು ತಮ್ಮ ಪೂಜೆಯಿಂದ ಪರಮಾತ್ಮನನ್ನು ಆರಾಧಿಸುತ್ತಿರುವರು. ಈ ಹೊತ್ತಿಗೆ ಭಕ್ತ ವರ್ಗವನ್ನು ಬಿಟ್ಟು ಉಳಿದವರು ಊಟದ ಗಡಿಬಿಡಿಗೆ ಹೋಗುತ್ತಾರೆ. ಕದಿಯಲು ಹೊರಟ ಮಂದಿ ತಮ್ಮ ಸಮಯವಿದೆಂದು ಹೊರಡುತ್ತದೆ. ಒಂದು ಧ್ವನಿಯ ಮೂಲಕ ಹಲವರಿಗೆ ಹಲವು ಕಡೆಗೆ ಹೋಗಲಿರುವ ಅಭಿಲಾಶೆ ಹುಟ್ಟುತ್ತಿರುವುದು. ಒಂದು ಧ್ವನಿಯ ಮೂಲಕ ಸಂಕೇತಗಳು ಉಂಟಾಗುತ್ತಿವೆ, ಆ ಸಂಕೇತದ ಕಡೆಗೆ ಲಕ್ಷ್ಯವನ್ನು ಹರಿಯಗೊಡುವ ಶಕ್ತಿ ಧ್ವನಿ ಪೂರ್ಣ ವಾಕ್ಯಗಳಲ್ಲಿದೆ. ಸಹಜವಾಗಿ ಭಾಷಣಕಾರನು ನುಡಿಯುತ್ತಿರುವನು. ಸತ್ಯದ ಮಾತನ್ನೆತ್ತಿ ಅದರ ಬೋಧೆಗೆ ಹೊರಡುವನು. ಆಗ ಅಧ್ಯಕ್ಷ ಮಹಾಶಯನು ಸುಳ್ಳುಗಾರನಾಗಿರಬಹುದು. ಸಭೆಯಲ್ಲಿ ಹಲವಾರು ಮಂದಿ ಸುಳ್ಳುಗಾರರೂ ಇರಬಹುದು. ಆ ಮಾತು ಅವರ ಹೃದಯಕ್ಕೆ ತಗಲುತ್ತದೆ. ತಗಲುವುದರೊಂದಿಗೆ ಸತ್ಯದ ಮಹಿಮೆಯು ಬೋಧೆಯಾಗುವುದು. ಧ್ವನಿಯು ಲಕ್ಷಿಸುವುದು ಗುಣ ಧರ್ಮದಿಂದ. ಗುಣ ಧರ್ಮಗಳ ನುಡಿಯೆತ್ತಿ ನುಡಿವ ನುಡಿ ಲಕ್ಷಣಾ ಶಕ್ತಿಯಿಂಧ ಕೂಡಿರುತ್ತದೆ. ಈತ ಆನೆಯಂತಹ ಜೀವಿ ಎಂದರೆ ಸಾಕು. ದೇಹದಿಂದ ಅಂತಿರುವನು

ಬುದ್ಧಿ ಆಹಾರಾದಿಗಳಿಂದ ಅದರ ಗುಣವು ಆತನಲ್ಲಿ ಲಕ್ಷಿಸಿ ಕಾಣುತ್ತವೆ. ಎಂಬ ಧ್ವನಿ ಹೊಮ್ಮುತ್ತಿದೆ. ಕವಿಗಳು ಈ ಧ್ವನಿಯ ಶಕ್ತಿಯಿಂದ ಕೂಡಿದ ಮಾತುಗಳನ್ನು ಉಲ್ಲೇಖಿಸುವರು. ಇದರಿಂದ ಅವರ ಕಾವ್ಯ ಸುಂದರವಾಗುವುದು.

ಕಾಳಿದಾಸನು ತನ್ನ ಕಾವ್ಯಗಳಲ್ಲಿ ಈ ಶಕ್ತಿಯನ್ನು ಅಲ್ಲಲ್ಲಿ ತೋರ್ಪಡಿಸಿದ್ದಾನೆ. ದುಷ್ಯಂತನು ಬೇಟೆಗೆ ಹೊರಟು ಹರಿಣ ಶಿಶುವನ್ನು ಬೆಂಬತ್ತತೊಡಗಿದನು. ಅದು ಬಹಳ ವೇಗದಿಂದ ಓಡುತ್ತಿತ್ತು. ಅದರ ಹಿಂದೆಯೇ ಆತನ ರಥವು ಓಡುತ್ತಿತ್ತು. ತನ್ನ ರಥದ ಓಡುವಿಕೆಯನ್ನು ಹೀಗೆ ಸಾರಥಿಗೆ ಹೇಳತೊಡಗಿದನು.

ಯದಾಲೋಕೇ ಸೂಕ್ಷ್ಮಂ ವ್ರಜತಿ ಸಹಸಾ ತದ್ವಿಪುಲತಾಂ।
ಯದರ್ಧೇ ವಿಚ್ಛಿನ್ನಂ ಭವತಿ ಕೃತ ಸಂಧಾನಮಿವ ತತ್॥
ಪ್ರಕೃತ್ಯಾ ಯದ್ವಕ್ರಂ ತದಪಿ ಸಮರೇಖಂ ನಯನಯೋ-।
ರ್ನ ಮೇ ದೂರೇ ಕಿಂಚಿತ್ ಕ್ಷಣಮಪಿ ನ ಪಾರ್ಶ್ವೇ ರಥಜವಾತ್॥

ರಥವು ಹೋಗುತಿದ್ದಾಗ ಯಾವುದು ಕಣ್ಣಿಗೆ ಸೂಕ್ಷ್ಮವಾಗಿ ಕಾಣುವುದೋ ಅದು ಕೂಡಲೇ ಬಹಳ ವಿಸ್ತಾರವನ್ನು ಹೊಂದುತ್ತದೆ. ಯಾವುದು ಅರ್ಧದಲ್ಲಿ ತುಂಡಾಗುವುದೋ ಅದು ಜೋಡಿಸಿದಂತೆ ತೋರುವುದು. ಪ್ರಕೃತಿಯಿಂದ ಯಾವುದು ವಕ್ರವಾಗಿ ಕಾಣುವುದೋ ಅದು ಸಮನಾಗಿ ಕಣ್ಣಿಗೆ ತೋರುತ್ತಿದೆ. ರಥದ ಓಟದಿಂದ ಯಾವುದೂ ದೂರದಲ್ಲಿರುವುದಿಲ್ಲ. ಯಾವುದೂ ಕ್ಷಣವೂ ಸಮೀಪದಲ್ಲಿರುವುದಿಲ್ಲ. ಎಂದು ರಥ ವೇಗವನ್ನು ನಿರೂಪಿಸುತ್ತಿರುವನು. ಕಾಳಿದಾಸನು ಮನೋರಥದ ವೇಗವನ್ನು ಇಲ್ಲಿ ಹೇಳುತ್ತಾನೆ.

ಕಾಳಿದಾಸನ ಅಭಿಜ್ಞಾನ ಶಾಕುಂತಲಾ ಕಥಾವಸ್ತುವನ್ನು ನೋಡಿದರೆ ಅತಿಸೂಕ್ಷ್ಮವಾಗಿದೆ. ಭಾರತದಿಂದ ಉಧೃತವಾದ ಅಲ್ಪವಾದ ಕಥಾವಸ್ತು. ಅದು ಕೂಡಲೇ ವಿಸ್ತಾರವನ್ನು ಹೊಂದುತ್ತಿರುವುದು. ದೂರ್ವಾಸನ ಶಾಪ ವೃತ್ತಾಂತದಿಂದ ನಾಲ್ಕನೆ ಅಂಕ ಮೊದಲ್ಗೊಂಡು ವಿಸ್ತಾರವಾಗಿ ಬಳೆಯುತ್ತದೆ. ದೂರ್ವಾಸನ ಶಾಪದ ಮೂಲಕ ಶಕುಂತಲಾ ದುಷ್ಯಂತರ ಪ್ರೇಮವು ಅರ್ಧದಲ್ಲಿ ತುಂಡಾಗಿ ಬಿಡುವುದು. ಈ ಸಂವಿಧಾನ ಮೂಲಕ ವಸ್ತು ಭಂಗವಾಗಿದೆ ಈ ವಸ್ತುವನ್ನು ಜೋಡಿಸಿದಂತೆ ಮಾಡಿ ದುಷ್ಯಂತನ ಕಲಂಕವನ್ನು ತೊಳೆದಿದ್ದಾನೆ. ಅದು ಕೃತ ಸಂವಿಧಾನ. ಪ್ರಕೃತಿಯಿಂದ ಅದು ಕವಿಕಲ್ಪಿತವಾಗಿದ್ದು ವಕ್ರವಾಗಿದೆ. ಮೂಲದಿಂದ ಭಿನ್ನ ಮಾರ್ಗವನ್ನು ಅವಲಂಬಿಸಿ

ವಕ್ರವೆನಿಸಿದೆ. ಅದು ನೋಡಿದಾಗ ಸಮರೇಖೆಯಂತೆ ಕಾಣುತ್ತಿರುವುದು. ವಕ್ರವಾಗಿದ್ದರೂ ಋಜುವಾಗಿ ಕಾಣುವುದು. ಕಾಳಿದಾಸನ ಮನೋರಥದ ವೇಗ ಇಂತಿದೆ. ಆತನ ಕಲ್ಪನೆ ಅತಿ ಮಹತ್ತಾದುದು. ಆ ಕಲ್ಪನೆಯ ರಚನೆಗೆ ಆತ್ಮ ಶಕ್ತಿ ತುಂಬಿದ್ದು ವಿಶೇಷ ಕಾಲ ಪ್ರಬಂಧ ರಚನೆಗೆ ಬೇಕಿಲ್ಲ. ಆವ ಕಲ್ಪನೆಯೂ ಒಂದು ಕ್ಷಣದಲ್ಲಿ ಹರಿದೋಡಿ ಕ್ಷಣದಲ್ಲಿ ಮಾಯವಾಗುತ್ತಿರುವುದು. ಕವಿಯ ನಿಜಶಕ್ತಿ ಇಂತಹುದು. ಈ ರೀತಿಯ ವಿಚಾರವನ್ನು ಕಥಾವಸ್ತುವಿಗೆ ತಾಗುವಂತೆ ಇಲ್ಲಿ ಹೇಳಿದ್ದಾನೆ. ದುಷ್ಯಂತನು ರಥವೇ ಆಗಿಬಿಟ್ಟಿದ್ದಾನೆ.

ದುಷ್ಯಂತನ ರಥ, ಜಿಂಕೆಯನ್ನು ಅನುಧಾವಿಸುತ್ತಿತ್ತು. ಆ ಜಿಂಕೆ ಹೇಗೆ ತೋರುತ್ತಿತ್ತು ಎಂದು ದುಷ್ಯಂತನೇ ಬಣ್ಣಿಸುವನು.

ಗ್ರೀವಾಭಂಗಾಭಿರಾಮಂ ಮುಹುರನುಪತತಿ ಸ್ಯಂದನೇ ಬದ್ಧದೃಷ್ಟಿ।
ಪಶ್ಚಾರ್ಧೇನ ಪ್ರವಿಷ್ಟಃ ಶರಪತನಭಯಾದ್ಭೂಯಸಾ ಪೂರ್ವಕಾಯಂ।
ದರ್ಭೈರರ್ಧಾವಲೀಢೈಃ ಶ್ರಮವಿವೃತಮುಖಭ್ರಂಶಿಭಿಃ ಕೀರ್ಣವರ್ತ್ಮಾ
ಪಶ್ಯೋದಗ್ರಪ್ಲುತತ್ವಾದ್ವಿಯತಿ ಬಹುತರಂ ಸ್ತೋಕಮುರ್ವ್ಯಾಂ ಪ್ರಯಾತಿ॥

ಜಿಂಕೆಯು ಕುತ್ತಿಗೆಯನ್ನು ಮುರಿದು ರಥದ ಕಡೆಗೆ ಪುನಃ ಪುನಃ ನೋಡುತ್ತಾ ಮುಂದಕ್ಕೆ ಚೆಲುವಾಗಿ ಓಡುತ್ತಿದೆ. ಅದರ ದೇಹ ಬಾಣದ ಹೊಡೆತಕ್ಕೆ ಹೆದರಿ ಹಿಂಭಾಗವು ಪೂರ್ವ ಭಾಗವನ್ನು ಸೇರಿ ಕೊಂಡಿದೆ, ದಾರಿಯಲ್ಲೆಲ್ಲಾ ಅರ್ಧ ಜಗಿದ ದರ್ಭೆ ಓಡಾಟದ ದಣಿವಿನಿಂದ ಚೆಲ್ಲಿಹೋಗಿದೆ. ಮೇಲಕ್ಕೆ ನೆಗೆದು ನಾಗಾಲೋಟದಿಂದ ಓಡುತ್ತಿರುವ ಕಾರಣ ಭೂಮಿಯಲ್ಲಿ ಅಲ್ಪಕಾಲವಿರುತ್ತದೆ. ಆಕಾಶದಲ್ಲಿ ಬಹಳ ಕಾಲವಿರುವುದು. ಎಂದು ದುಷ್ಯಂತನು ಹರಿಣಗಮನವನ್ನು ಕುರಿತು ಹೇಳುತ್ತಿರುವನು. ದುಷ್ಯಂತನು ಬೇಟೆಯಾಡಬಂದ ಹರಿಣ ಶಕುಂತಲೆ. ಶಕುಂತಲೆ ಗಾಂಧರ್ವ ವಿವಾಹದ ನಂತರ ಅಲ್ಪ ಕಾಲ ಮಾತ್ರ ಭೂಮಿಯಲ್ಲಿರುವಳು. ಮುಂದೆ ಮೇನಕೆ ಎತ್ತಿಕೊಂಡು ಹೋದ ಬಳಿಕ ಬಹಳ ಕಾಲ ಆಕಾಶದಲ್ಲೇ ಇರುವಳು. ಆಕೆಯ ದರ್ಶನ ನಾಟಕದಲ್ಲಿ ಕಾಣಸಿಗುವುದಿಲ್ಲ. ಬಹುಕಾಲ ಮಾರೀಚನ ಆಶ್ರಮದಲ್ಲೇ ಇರುವಳು. ವಿವಾಹದ ನಂತರ ಅಧಿಕಾರ ಸ್ಥಾನದಲ್ಲಿದ್ದ ದುಷ್ಯಂತನಲ್ಲಿಗೆ ಬಂದಳು. ಅಲ್ಲಿ ದುಷ್ಯಂತನಿಂದ ತಿರಸ್ಕಾರಗೊಂಡಳು. ತಿರಸ್ಕಾರಗೊಂಡ ಆಕೆ ತಿರುತಿರುಗಿ ದುಷ್ಯಂತನನ್ನೇ ನೋಡಿದಳು. ಗತಿ ಇರದೆ ತನ್ನೊಂದಿಗೆ ಬಂದ ಋಷಿ ಕುಮಾರರನ್ನು ಅನುಸರಿಸಿದಳು. ದುಷ್ಯಂತನ

ಮಾತಿನ ಶರದ ಭಯದಿಂದಲೇ ಆಕೆ ತನ್ನ ತಂದೆಯುವರ ಪಂಗಡವನ್ನು ಸೇರಿದ್ದಾಳೆ. ವೈವಾಹಿಕ ಜೀವನ ಪವಿತ್ರ ಪ್ರೇಮ ಪೂರ್ಣವಾಗಿ ದರ್ಭೆಯ ಉಪಯೋಗದಂತಿದೆ. ಒಮ್ಮೆ ಕ್ರಿಯೆಗೆ ಉಪಯೋಗಗೊಂಡ ದರ್ಭೆ ಮತ್ತೆ ಉಪಯೋಗಕ್ಕೆ ಬೀಳದು. ಜಿಂಕೆಯಿಂದ ಪ್ರೇಮ ವಿವಾಹ ನಡೆಸಲಾಗಿದೆ. ಈ ಸುದ್ದಿ ದಾರಿಯಲ್ಲೆಲ್ಲಾ ಹರಡಿದೆ. ಈ ಶಕುಂತಲೆಯ ವಿವಾಹ ಎಲ್ಲರಲ್ಲೂ ಹಬ್ಬಿದೆ. ಉಪಯೋಗಗೊಂಡ ದರ್ಭೆಯಂತಾಗಿದ್ದಾಳೆ. ಮುಂದೆ ಆಕೆ ಅಲ್ಪಕಾಲ ಭೂಮಿಯಲ್ಲಿರುವಳು. ಬಹುಕಾಲ ತಾಯಿಯ ಆರೈಕೆಯಲ್ಲೇ ಇರುವಳು.

ಮುಕ್ತೇಷು ರಶ್ಮಿಷು ನಿರಾಯತ ಪೂರ್ವಕಾಯಾಃ
ನಿಷ್ಕಂಪಚಾಮರಶಿಖಾಃ ನಿಭೃ ತೋರ್ಧ್ವ ಕರ್ಣಾಃ।
ಆತ್ಮೋದ್ಧತೈರಪಿ ರಜೋಭಿರಲಂಘನೀಯಾ
ಧಾವಂತ್ಯಮೀ ಮೃಗಜವಾಕ್ಷಮಯೇವರಥ್ಯಾಃ॥

ಸೂತನು ಹೇಳುತ್ತಿರುವ ಈ ಮಾತು ಎಷ್ಟು ಧ್ವನಿಪೂರ್ಣವಾಗಿದೆ. ಎಲೇ ಆಯುಷ್ಮಂತನೇ ನೋಡು. ಕಡಿವಾಣ ಬಿಟ್ಟ ಕೂಡಲೇ ಕುದುರೆಗಳ ಪೂರ್ವಕಾಯ ನೀಳವಾಗಿ ಕಾಣುವುದು. ರಥದ ಚಾಮರಗಳೆಲ್ಲಾ ಅಲ್ಲಾಡದಿವೆ. ಕುದುರೆಗಳು ಕಿವಿಯನ್ನು ಎತ್ತಿ ಹಿಡಿದಿವೆ. ತಾವೇ ಎಬ್ಬಿಸಿದ ಹುಡಿಯಿಂದ ದಾರಿ ತುಂಬಿ ಮೃಗವನ್ನು ಹಿಡಿಯದೆ ಶಾಂತಿಗೊಳ್ಳದವುಗಳಂತೆ ವೇಗದಿಂದ ಓಡುತ್ತಿವೆ ಎಂದೆನ್ನುವನು. ಕಾಳಿದಾಸನ ಹರಿಣ ಶಕುಂತಲೆ. ದುಷ್ಯಂತನು ರಥಾರೂಢನು. ರಥವೇ ದುಷ್ಯಂತನು. ಆತನಿಗೆ ಉಂಗುರ ದೊರಕಿ ತನ್ನ ಚರಿತ್ರೆ ತಿಳಿಯ ಬಂತು. ಶಾಪ ತಪ್ಪಿತು. ಜ್ಞಾನದ ಬೆಳಕು ಒಡೆಯಿತು. ಅದಾಗ ತನ್ನ ಪೂರ್ವ ಚರಿತ್ರ ಬಹಳ ಗಹನವಾಗಿ ಕಂಡಿತು. ಮಾಡಿದ ಅಪರಾಧದಿಂದ ದುಃಖಿತನಾದನು. ಸಂತಾನ ಶೋಕಿತನಿಗೆ ಶಕುಂತಳಾ ಶೋಕ ಇಮ್ಮಡಿಸಿತು. ಯಾವ ಉತ್ಸವವೂ ಇದರಿಂದ ಬೇಡವಾಯಿತು. ಚಾಮರ ಶಿಖೆಗಳೆಲ್ಲಾ ಅರಸನ ಅಪ್ಪಣೆಯಂತೆ ನಿಷ್ಕಂಪವಾದುವು. ಎಲ್ಲರೂ ಕಿವಿಯನ್ನು ನಿಗುರಿಸಿ ಇದರ ಕಾರಣವನ್ನು ತಿಳಿಯುವ ಆತುರಗೊಂಡಿರುತ್ತಾರೆ. ದುಷ್ಯಂತನು ತಾನೇ ಮಾಡಿದ ಅಪರಾಧ; ಅದು ಕಣ್ಣನ್ನು ಕಟ್ಟುತ್ತಿರುವ ಧೂಳಿ. ಈ ಧೂಳಿಯು ದಾಟಲು ಅಸಾಧ್ಯವಾಗದುದಾಗಿತ್ತು. ಆದರೂ ಆತನು ಶಕುಂತಲಾ ವಿಮೋಹಿತನಾಗಿಯೇ ಇದ್ದನು.

ಇಲ್ಲಿ ಕವಿ ಕಾಳಿದಾಸನು ಶಕುಂತಲೆಯನ್ನು ಹರಿಣವನ್ನಾಗಿ ಹೋಲಿಸಿ ತನ್ನ ಕಥಾವಸ್ತುವನ್ನು ರೂಪಿಸಿದ್ದಾನೆ. ರಥ ವೇಗದಿಂದ ದುಷ್ಯಂತನ ಚರಿತ್ರೆಯನ್ನು ಚಿತ್ರಿಸಿರುವನು. ರಥದ ವೇಗವು ಕಾಳಿದಾಸನ ಮನೋರಥ ವೇಗವನ್ನು ಚಿತ್ರಿಸುವುದರೊಂದಿಗೆ ಕಥಾವಸ್ತುವನ್ನು ಅಂಕಿಸುತ್ತಿರುವುದು. ಇಂತೆಯೇ ತುಂಬಿಯ ಚಿತ್ರಣದಿಂದ ದುಷ್ಯಂತನ ಚರಿತ್ರೆಯನ್ನು ಈ ಗ್ರಂಥದಲ್ಲಿ ಚಿತ್ರಿಸಿರುವನು. ಕವಿ ಕಾಳಿದಾಸನು ತನ್ನ ಗ್ರಂಥದಲ್ಲಿ ಎಷ್ಟು ವಿಚಾರವನ್ನು ತುಂಬಿರುವನೋ ಅದು ನಮಗೆ ಎಟಕದ ವಸ್ತು. ಹಾಗಿದ್ದರೂ ರೂಪಗ್ರಾಹಿಕೆಯಿಂದ ತಿಳಿಯಪಡಿಸುವ ಯತ್ನ ಎಲ್ಲರಿಗೂ ಬೇಕಾದುದು.



# ಶಾಕುಂತಲದಿಂದ ಲೋಕಚರಿತ್ರವನ್ನು ಚಿತ್ರಿಸುವ ಕಾಳಿದಾಸ

ಕಾವ್ಯದಲ್ಲಿ ದೃಶ್ಯ ಶ್ರವ್ಯವೆಂದು ಎರಡು ಭೇದ. ದೃಶ್ಯಕಾವ್ಯ ನಾಟಕ. ನಾಟಕಗಳ ಸ್ಥಾನ ವೇದದ್ದು. ಇದರಿಂದಲೇ ಭರತ ಮುನಿಯು

ಸರ್ವ ಶಾಸ್ತ್ರಾರ್ಥಸಂಪನ್ನಂ ಸರ್ವ ಶಿಲ್ಪ ಪ್ರದರ್ಶಕಂ।
ನಾಟ್ಯಸಂಜ್ಞಮಿದಂ ವೇದಂ ಸೇತಿಹಾಸಂಕರೋಮ್ಯಹಂ॥

ಎಂದು ನಾಟಕ ವಿಷಯದಲ್ಲಿ ಹೇಳಿರುವನು. ಎಲ್ಲಾ ಶಾಸ್ತ್ರಗಳ ಅರ್ಥ ಸಂಪತ್ತು, ಎಲ್ಲಾ ಶಿಲ್ಪಗಳ ಪ್ರದರ್ಶನೆ, ಇತಿಹಾಸ ಪುರಾಣಗಳ ಎಲ್ಲಾ ಬಗೆಯ ವಿವಿಧ ಚಾತುರ್ಯ ನೀತಿಗಳ ಸಮಷ್ಟಿ ರೂಪವಾದುದು ನಾಟಕ. ನಾಟಕ ವೇದ ನಾಮುಕರಣನಿಂದ ಕೂಡಿದ್ದು ಎಂದು ಇದರಿಂದ ನಮಗೆ ವಿಷದವಾಗುವುದು. ವೇದದ ಸಂಪರ್ಕ ನಾಟಕಕ್ಕೆಲ್ಲಿ? ನಾಟಕಗಳು ವೇದದಿಂದ ಬೋಧಿಸಿದ ಮೋಕ್ಷ ಸಾಧನೆಯ ಉದ್ದೇಶವನ್ನು ಸಾಧಿಸಲಾಪವೇ? ವೇದದಂತೆ ದೃಶ್ಯಕಾವ್ಯದಿಂದ ಸಕಲ ಜನತೆಯನ್ನು ಉನ್ನತಿ ಮಾರ್ಗಕ್ಕೆ ತರಲು ಸಾಧ್ಯವಿದೆಯೇ? ಇದೆಂತಹ ಭ್ರಮೆ ಎಂದು ಹಲವರು ವಾದಿಸಬಹುದು. ಇದಕ್ಕೆ ಭರತನೇ ಉತ್ತರವನ್ನು ಹೇಳದೆ ಉಳಿಯಲಿಲ್ಲ.

ಜಗ್ರಾಹ್ಯ ಪಾಠ್ಯಂ ಋಗ್ವೇದಾತ್ ಸಾಮತೋ ಗೀತಮೇವಚ।
ಯಜುರ್ವೇದಾದಭಿನಯಾನ್ ರಸಾನಥರ್ವಣಾದಪಿ॥

ಈ ಪಂಚಮ ವೇದವು ಋಗ್ವೇದದಿಂದ ಶಬ್ದವನ್ನು ಸಂಕಲಿಸಿತು. ಯಜುರ್ವೇದದಿಂದ ಅಭಿನಯವನ್ನು ಕೊಂಡಿತು; ಸಾಮವೇದದಿಂದ ಗಾಯನವನ್ನು ಪಡೆಯಿತು; ಅಥರ್ವವೇದದಿಂದ ರಸವನ್ನು ಸಾಧಿಸಿತು. ಹೀಗೆ ಇದು ನಾಲ್ಕು ವೇದಗಳ ಅಂಗದಿಂದ ಉಗಮಿಸಿ, ಐದನೆಯ ವೇದವು ಬಂದಿತು. ಈ ವೇದದ ಹೊನಲು "ಪಂಚಮಂ ಸಾರ್ವ ವರ್ಣಿಕಂ" ಎಂದು ಭರತನು ಹೇಳಿರುವನು. ಈ ವೇದದ ಹೊನಲಲ್ಲಿ ಮುಳುಗಿ ಮಿಾಯಬೇಕು. ಈ ವೇದ ಎಲ್ಲ ವರ್ಣಗಳಿಗಾಗಿಯೇ ಉಳ್ಳದು. ಎಲ್ಲಾ ಜಾತೀಯರೂ ಈ ವೇದದಲ್ಲಿ ಸಮಾನ ಹಕ್ಕುಳ್ಳವರಿದ್ದಾರೆ. ಸಮಾನತೆಯ ವಿಶಿಷ್ಟ ಭೂತಿ ಇದೊಂದೇ. ಉಳಿದ ಕಾವ್ಯಗಳು ಇಂತಹವಲ್ಲ.

ದೃಶ್ಯಕಾವ್ಯದ ಹಿರಿಮೆ ಬಹು ಮಹತ್ವವುಳ್ಳುದೂ ಅನರ್ಘವೂ ಆಗಿದೆ ಎಂಬುದನ್ನು ಕಾವ್ಯ ಕರ್ತೃಗಳು ತಿಳಿದಿದ್ದಾರೆ. ಇದರಿಂದಲೇ "ನಾಟಕಾಂತಂ ಕವಿತ್ವಂ" ಎಂಬ ನುಡಿ ಜನಜನಿತವಾಗಿದೆ. ಕವಿತ್ವ ಇಲ್ಲದೆ ಸಾಹಿತ್ಯ, ನಾಟಕದ

ವರೆಗೆ. ನಾಟಕದಿಂದ ಮಿಗಿಲಾದ ಇನ್ನೊಂದು ವಸ್ತು ಲೋಕದಲ್ಲಿಲ್ಲ. ಸಮಾಜದ ಹೃದಯವನ್ನು ಶುಚಿಗೊಳಿಸಿ ಉತ್ತಮ ನಡೆಗೊಂಬಂತೆ ಮಾಡಲು ನಾಟಕಗಳಿಗೇ ಶಕ್ತಿ. ಈ ನಾಟಕಗಳು ಇದರಿಂದಲೇ ದೃಶ್ಯಗಳಾಗಿವೆ. ಜನರ ಮುಂದೆ ರೂಪುಗೊಂಡು ಕಾಣುವ ವಸ್ತುಗಳಾಗಿವೆ, ಕಣ್ಣಮುಂದೆ ತೋರುವ ಚಿತ್ರರೂಪಗಳಿಂದ ನಡೆಯುತ್ತದೆ. ನಮ್ಮ ಕಣ್ಣೆದುರು ಕಾಣುವ ಘಟನೆಯನ್ನು ಕಂಡಾಗ ಯಾರ ತಲೆ ತಿರುಗದು. ಸನ್ಮಾರ್ಗಕ್ಕೆ ಹರಿಯದು. ಕಣ್ಣಿನಿಂದ ಕಂಡು ಹುಟ್ಟುವ ತುಷ್ಟಿ ಪುಷ್ಟಿ, ಸದಸದ್ವಿವೇಚನಗಳನ್ನು ಪಂಡಿತ ಪಾಮರ ಭೇದವಿಲ್ಲದೆ ಸಕಲ ಜನರೂ ಹೊಂದಬಹುದು. ಈ ಕಾರಣದಿಂದಲೇ ಕವಿಕುಲ ಗುರುವಾದ ಕಾಳಿದಾಸನು ಮಾಳವಿಕಾಗ್ನಿ ಮಿತ್ರ ನಾಟಕದ ಆರಂಭದಲ್ಲಿ,

ತ್ರೈಗುಣ್ಯೋದ್ಭವಮತ್ರ ಲೋಕ ಚರಿತಂ ನಾನಾರಸಂ ದೃಶ್ಯತೇ।
ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ॥"

ಎಂದು ನಾಟಕ ವಿಷಯದಲ್ಲಿ ಹೇಳಿದ್ದಾನೆ. ಜನತೆ ತ್ರಿಗುಣ (ಸತ್ವ, ರಜ, ತಮ)ದಿಂದ ಕೂಡಿದೆ. ಜನರ ನಡೆಯು ತ್ರಿಗುಣದಿಂದ ಹುಟ್ಟಿ ನಾನಾ ರಸ ದಿಂದ ಕಾಣುತ್ತಿದೆ. ನಾಟಕ ಬೇರೆ ಬೇರೆ ರಸ ರುಚಿಯುಳ್ಳ ಮಾನವನಿಗೆ ಸಮಷ್ಟಿ ಭೂತವಾದ ರಸಭೋಜನವೆಂದೇ ಕಾಳಿದಾಸನು ಸಿದ್ಧಾಂತ ಪಡಿಸಿ ದ್ದಾನೆ. ಈ ಸಿದ್ಧಾಂತವನ್ನು ಮಾಳವಿಕಾಗ್ನಿ ಮಿತ್ರದಲ್ಲಿ ಹೇಳಿದ ಕಾಳಿದಾಸನು ಲೋಕ ಚರಿತ್ರೆಯನ್ನು ಸನ್ಮಾರ್ಗಕ್ಕೆ ತರಲು ಸೊಂಟಕಟ್ಟಿದ್ದಾನೆ. ಇದಕ್ಕೆ ಕೈಯೂರಿದ ಆತನು ಮಾಳವಿಕಾಗ್ನಿ ಮಿತ್ರದಲ್ಲೂ ಅಭಿಜ್ಞಾನ ಶಾಕುಂತಲ ದಲ್ಲೂ ಲೋಕ ಚರಿತ್ರೆಯನ್ನು ಸ್ಪಷ್ಟವಾಗಿ ಚಿತ್ರಿಸ ಹೊರಟಿದ್ದಾನೆ. ಅವನು ಚಿತ್ರಿಸಿದ ಲೋಕ ಚರಿತ್ರೆ ಯಾವುದು? ಅದರಿಂದ ನಾವು ಜಾಗೃತಿ ಗೊಳ್ಳತಕ್ಕುದೇನಿದೆ? ಎಂಬೀ ವಿಚಾರ ಓದುಗರ ಕೈಯಲ್ಲಿ; ನಾಟಕ ಪ್ರೇಕ್ಷ ಕರ ಕರ್ತವ್ಯದಲ್ಲಿ ಸೇರಿದ ಹಕ್ಕು.

ಶಾಕುಂತಳದ ಕಥಾವಸ್ತು ಮಹಾ ಭಾರತ, ಪದ್ಮ ಪುರಾಣಗಳಲ್ಲಿವೆ. ಅಲ್ಲಿನ ಕತೆಯನ್ನು ಶಾಕುಂತಳಾ ನಾಟಕ ಸೃಷ್ಟಿಗೆ ಎತ್ತಿದ್ದಾನೆ.

ದುಷ್ಯಂತ ಹಸ್ತಿನಾವತಿಯ ಚಕ್ರವರ್ತಿ. ಈತನು ಬೇಟೆಗೆ ಹೊರಟನು. ಆರಣ್ಯದಲ್ಲಿ ಹರಿಣ ಶಿಶುವೊಂದೇ ಕಣ್ಗೆ ಗೋಚರಿಸಿತು. ಹರಿಣವನ್ನು ಕಾಣು ತ್ತಲೇ ಹೆದೆಯೇರಿಸಿದ ಬಿಲ್ಲುಳ್ಳ ರಾಜನು ಬಿಲ್ಲನ್ನು ಜಗ್ಗಿದನು. ರಥವನ್ನು ಅದರ ಹಿಂದೆಯೇ ಓಡಿಸಿದನು. ಕಿವಿ ಬಳಿಯಲ್ಲಿ ಹಿಡಿದ ಮುಷ್ಟಿಯುಳ್ಳ

ದುಷ್ಯಂತನು ಜಿಂಕೆಯನ್ನು ಬೆನ್ನಟ್ಟಿ ಕಣ್ವ ಮುನಿಯ ತಪೋವನದ ಬಳಿಗೆ ಸೇರಿದನು. ಕಣ್ವನು ವಿದ್ಯಾನಿಧಿ, ಕುಲಪತಿ; ಕುಲಪತಿಯ ಅಂತೇವಾಸಿಗಳು ಸಮಿಧೆಗಾಗಿ ಈ ಹೊತ್ತು ಹೊರಟಿದ್ದರು. ಆಶ್ರಮದ ಹರಿಣವನ್ನು ಹೊಡೆದು ಕೆಡೆಯಲೆಳಸುವ ರಾಜನನ್ನು ಮುನಿವಟುಗಳು ಅಡ್ಡೈಸಿದರು. ಅಯ್ಯಾ ಆಶ್ರಮ ಮೃಗ ಕೊಲ್ಲಬಾರದು ಕೊಲ್ಲಲಾಗದು ಎಂಬ ಕೂಗಿಟ್ಟು ದುಷ್ಯಂತನನ್ನು ತಡೆದು, ರಾಜನನ್ನು ಆಶ್ರಮವನ್ನು ಸಂದರ್ಶಿಸಲಾಗಿ ಕರೆಗೊಟ್ಟು ಕುಲಪತಿಯಿರದ ಸುದ್ದಿಯನ್ನೊರೆದರು. ಆಶ್ರಮ ಪೀಡೆಯಾಗದಂತೆ ತನ್ನ ಸೇನೆಗೆ ಆಜ್ಞೆಗೊಳ್ಳಲು ಕೇಳಿಕೊಂಡರು. ಆಶ್ರಮದಲ್ಲಿ ಕುಲಪತಿಯಿರದ ವೇಳೆ ಶಕುಂತಲೆ ಸರ್ವ ಜನರ ಸತ್ಕಾರಕ್ಕೆ ಕಣ್ವನಿಂದ ಪ್ರೇರಿತಳಾದ ವೃತ್ತಾಂತವನ್ನೊರೆದರು. ಆಶ್ರಮ ಶಿಕ್ಷಣದ ಸ್ಥಾನ. ಅಂತೇವಾಸಿಗಳ ಬೀಡು, ಸಹ ಶಿಕ್ಷಣ ಕೇಂದ್ರ ಹತ್ತು ಸಾವಿರ ವಿದ್ಯಾರ್ಥಿಗಳ ಕುಲಪತಿಯ ಪ್ರಧಾನ ಕೇಂದ್ರ ಎನ್ನುತ್ತಲೇ ಯಾವ ಮನುಷ್ಯನಿಗೆ ಆ ಸ್ಥಳವನ್ನು ಸಂದರ್ಶಿಸದೆ ಹೋಗಲು ಮನಬರುವುದು. ದುಷ್ಯಂತನು ತನ್ನ ಸೈನಿಕರಿಗೆ ಸಾರಥಿಗೆ ಸಮುಸ್ತರಿಗೆ ವಿದ್ಯಾಕೇಂದ್ರಕ್ಕೆ ಧಕ್ಕೆಯಾಗದಂತೆ ನೋಡಲಾಜ್ಞಾಪಿಸಿದನು. ಈ ವಿದ್ಯಾ ಕೇಂದ್ರ ಸ್ಥಾನವನ್ನು ಸಂದರ್ಶಿಸಲು ಉಚಿತವಾದ ವೇಷ ಭೂಷೆಗಳಿಂದ ರಾಜನು ಸನ್ನದ್ಧನಾದನು. ಅಲ್ಲಿಗೆ ತೆರಳಿ ಅಲ್ಲಿಂದ ತನಗೊಂದು ಪ್ರಶಸ್ತಿ ಪತ್ರ ದೊರೆಯಬೇಕೆಂಬ ಮಹದಾಕಾಂಕ್ಷೆ ದುಷ್ಯಂತನಿಗೆ ಹುಟ್ಟಿರಬಹುದು. ಉತ್ತಮ ವೇಷೋಪಚಾರಗಳಿಂದ ಕೂಡಿ ಆಶ್ರಮದ ಬಾಗಿಲಿಗೆ ಬಂದನು. ಆದರ ಮುಂದೆ ದೊಡ್ಡ ಉಪವನದ ಲತೆಗಳಿಗೆ ಸಖಿಯರೊಡಗೂಡಿ ಶಕುಂತಲೆ ನೀರೆರೆಚುತಿದ್ದಳು. ಗಡಿಗೆಯಲ್ಲಿ ನೀರನ್ನು ತುಂಬಿ ಮರಗಳಿಗೆ ಬಳ್ಳಿಗಳಿಗೆ ಫಲವೃಕ್ಷಗಳಿಗೆ ಒಂದೂ ಬಿಡದಂತೆ ಹೆಸರುಗೊಂಡು ಗೆಳತಿಯರು ಜಲಸೇಚನೆಯನ್ನು ನಡೆಸುತಿದ್ದರು. ಒಬ್ಬೊಳೊಬ್ಬಳ ಕೆಲಸದ ಪೂರಯಿಕೆಯಲ್ಲಿ ಹಿಂಬೀಳದಂತೆ ಸಹಕರಿಸುತಿದ್ದರು. ಪಾಲುಗೊಂಡೇ ಕೆಲಸವನ್ನು ಸಾಧಿಸುತಿದ್ದರು. ಉಪವನದ ಬಳಿ ಸೇರುತ್ತಲೇ ದುಷ್ಯಂತನು ನೀರೆರೆವ ಚೆಲುಗುವರಿಯರನ್ನು ಕಂಡನು. ಅವರು ಮಾತಾಡುತ್ತಿರುವುದನ್ನು ಕೇಳಿದನು. ದುಷ್ಯಂತನ ಕಣ್ಣು ಅವರ ರೂಪದ ಮೇಲಾಯಿತು. ಅಂಗಾಂಗಗಳ ಮೇಲೆ ಹರಡಿತು. ಕಣ್ಣಿನ ಬಾಗಿಲು ತೆರೆದಃ ಎದೆಯಲ್ಲಿ ಅವರ ರೂಪದ ಚಿತ್ರವನ್ನು ತೆಗೆಯಹೊರಟನು. ನಿಂತಲ್ಲೇ ಆದನು.

ಗೆಳತಿಯರೊಡಗೂಡಿ ಶಕುಂತಲೆ ಮರಗಳ ಬಳ್ಳಿಗಳ ಪೊದೆಗಳ, ಇನ್ನಿತರ ಹಿಂಡುಗಳ ಸಾಲು ಸಾಲುಗಳಿಗೆ ಓಡಾಡಿ ನೀರೆರೆಯುತ್ತಲೇ ಇದ್ದಳು. ಆರಡಿಯೊಂದು ಹೂವಿಂದೆದ್ದು ಶಕುಂತಲೆಯ ಮೊಗದಾವರೆಗೆ ಬೀಳತೊಡಗಿತು. ದುಷ್ಯಂತನ ಕಣ್ಣುಗಳು ಆ ಕಡೆ ಹರಿದುವು. ತುಂಬಿಯು ಕಣ್ಣ ಮೇಲೆ ಬೀಳತೊಡಗಿ ದೃಷ್ಟಿಬಾಧೆಯಾಗತೊಡಗಿತು. ಕೈಯುಲುಗಿ ಸಖಿಯರನ್ನು ಕೂಗಿ ಕಣ್ಣು ಕಿವಿಗಳಿಗೆ ಉಂಟಾಗುವ ಬಾಧೆಯನ್ನು ಹೇಳ ತೊಡಗಿದಳು. ಅದಾಗ ಗೆಳತಿಯರು ಆಕೆಯನ್ನು ಕೆಣಕಿದರು. ತಡೆಯಲು ರಾಜನನ್ನು ಕೂಗು ಎಂದು ಹೇಳಿದರು. ನೀರೆರೆವ ಕೆಲಸದಲ್ಲಿ ಶಕುಂತಲೆ ಹಿಂದಾದಳು. ಸಖಿಯರ ಕೂಗು ದುಷ್ಯಂತನ ಕರ್ಣ ಪುಟದಲ್ಲಿ ಬಡೆದುವು. ರಾಜನಿಗೆ ಮಲ್ಲಿಕಾ ಲತೆಗೆ ನೀರೆರಚುತ್ತಿರುವ ಶಕುಂತಳೆಯ ಮುಖದರ್ಶನಾಭಿಲಾಷೆ ಹೆಚ್ಚಿ ಆ ಕಡೆಗೆ ಹೋದನು. ತುಂಬಿಯನ್ನೋಡಿಸಿದನು. ಅಲ್ಲಿ ಧನ ವೈಭವದ ಬೀಡಾದ ರಾಜನ ಸೌಂದರ್ಯದ ದರ್ಶನ ಶಕುಂತಲೆಗಾಯಿತು. ಗೆಳತಿಯರೆಲ್ಲರೂ ಕಂಡರು. ಅವರ ಕಣ್ಣುಗಳು ಕೃತಾರ್ಥವಾದುವು. ದುಷ್ಯಂತನ ಕಣ್ಣುಗಳು ಜನ್ಮಸಾಫಲ್ಯವನ್ನು ಪಡೆದವು. ದುಷ್ಯಂತ ಸುಂದರ ಭೂಷಾಭೂಷಿತ ಸುಂದರ ತರುಣ ರಾಜ. ಶಕುಂತಲೆ ರಾಜರ್ಷಿ ವಿಶ್ವಾಮಿತ್ರ ಮತ್ತು ಮೇನಕೆಯರ ಸಂತಾನ; ಚೆಲುಗುವರಿ. ಇಬ್ಬರೂ ತಾರುಣ್ಯ ಹೊಸ್ತಿಲಿಗೆ ಕಾಲ್ಮಡಗಿದ್ದರು. ಪ್ರಥಮ ದರ್ಶನದಲ್ಲೇ ದುಷ್ಯಂತ ಶಕುಂತಲೆಯರಲ್ಲಿ ಅನುರಾಗ ಹುಟ್ಟಿತು. ರಾಜನು ಮಾತಿಗೆ ಮುಂದರಿದನು. ಶಕುಂತಲೆಯ ಹುಟ್ಟನ್ನು ಶೋಧಿಸಿದನು. ತನಗೆ ಪ್ರೇಯಸಿಯಾಗಲರ್ಹಳೆಂದೇ ಭಾವನೆಗೊಂಡನು. ದುಷ್ಯಂತನಲ್ಲಿ ತುಂಬಿದ ಯೌವನದ ಹೊನಲು, ಅಂತೆಯೇ ಪ್ರಭುತ್ವ, ಪ್ರಭುತ್ವದೊಂದಿಗೆ ಸಂಪತ್ತಿ ಇವುಗಳಿಂದ ಆತನಿಗೆ ಒಂದರ ಮೇಲೊಂದು ಇದ್ದು ತನ್ನ ಕಾಮಾಭಿಲಾಷೆಯ ಮಾರ್ಗಯೋಚನೆ ಮೊಳೆಯಿತು. ಶಕುಂತಲೆ ಸಖಿಯರ ಮೂಲಕ ರಾಜಪುರುಷನೆಂದು ದುಷ್ಯಂತನನ್ನು ಗೊತ್ತುಮಾಡಿಕೊಂಡಳು. ಇಬ್ಬರ ಬಗೆಯೊಂದಾಯಿತು. ಕುಲಪತಿ ಇರದ ಹೊತ್ತು ಒಂದರ ಮೇಲೊಂದು ಕಾರಣ ಬಂದು ರಾಜನು ನಿಂತು, ಆಶ್ರಮದ ಅಧಿಕಾರಿಣಿಯಂತಿದ್ದ ಶಕುಂತಲೆಗೆ ಮತ್ತು ದುಷ್ಯಂತನಿಗೆ ತಮ್ಮ ಮನದ ಬಯಕೆಯ ಪ್ರಣಯ ಪತ್ರದ ವರೆಗಣ ಕೆಲಸಗಳು ನಡೆದುವು. ಗೆಳತಿಯರು ಈ ಹೊತ್ತಿನಲ್ಲಿ ಕಣ್ವನ ಇರವು ಇರುತ್ತಿದ್ದರೆ ಚೆನ್ನಾಗುತ್ತಿತ್ತೆಂದು ಎಣಿಕೆಗೊಂಡು ಅದನ್ನೇ ಮಾತೆತ್ತಿದರು. ಪ್ರಣಯ ಪತ್ರ ನಡೆದು ಸಲ್ಲನಲ್ಲಿಯ

ರಾಗ ಹೊರಟರು. ಅದೇ ಅವರ ಇಷ್ಟಾರ್ಥವಾಗಿತ್ತು. ಉಂಗುರ ತೊಡಿಸಿ ಗೃಹಿಣಿಯಾಗಿ ಸ್ವೀಕರಿಸುವೆನೆಂಬ ಮಾತಿತ್ತು ದುಷ್ಯಂತನು ತನ್ನ ಕಾಮ ತೃಪ್ತಿಯನ್ನು ಸಾಧಿಸುವ ಗಾಂಧರ್ವ ವಿವಾಹಗೊಂಡನು. ಆಶ್ರಮದ ಗೆಳತಿಯರಿಗೆ ಇದೆಲ್ಲಾ ತಿಳಿದಿತ್ತು. ದುಷ್ಯಂತ ಶಕುಂತಲೆಯರು ಅನೇಕ ರಾಜರ್ಷಿಗಳೂ, ಕನ್ನಿಕೆಯರೂ ಸಾಧಿಸಿದ ಹಂತಿಯನ್ನು ಕೊಂಡರು. ಶಕುಂತಲೆ ರಾಜನ ಭರವಸೆಯ ಉಂಗುರವನ್ನು ಬೆರಳಲ್ಲಿ ಧರಿಸಿ ತಂದೆಯ, ದುಷ್ಯಂತನ ಮಾರ್ಗ ನಿರೀಕ್ಷೆಯಲ್ಲಿ ತೊಡಗಿದಳು. ಆಶ್ರಮದಲ್ಲಿ ಈ ಸುದ್ದಿ ಹರಡಿದ್ದ ಮಾತಾಯಿತು.

ದುಷ್ಯಂತ ಶಕುಂತಲೆಯರು ಪ್ರಣಯ ವಿವಾಹವನ್ನು ಬಳೆಸಿದರು. ಗಾಂಧರ್ವ ನಾಮಕರಣವ ವಿವಾಹವು ನಡೆಯಿತು. ರಾಜ್ಯಾಧಿಕಾರಿಯಾದ ದುಷ್ಯಂತನು ನಂಬುಗೆಗೊಟ್ಟು ರಾಜ್ಯಕ್ಕೆ ತೆರಳಿದನು. ಹೋದ ದುಷ್ಯಂತನು ಬರಲೇ ಇಲ್ಲ. ಶಕುಂತಲೆ ತನ್ನ ಕೃತ್ಯ ಮತ್ತು ಪತಿಯ ವಿಚಾರದಿಂದ ಲೋಕವನ್ನೇ ಮರೆತಳು. ದುರ್ವಾಸನು ಕಣ್ವನ ಆಶ್ರಮಕ್ಕೆ ಬಂದನು. ಪತಿಪರ ವಿಚಾರದಲ್ಲಿ ಮಗ್ನಳಾದ ಶಕುಂತಳೆಗೆ ಇವನು ಬಂದುದು ತಿಳಿಯಲಿಲ್ಲ. ಇದರಿಂದ ಆಕೆ ಆತನನ್ನು ಸತ್ಕರಿಸದೆ ಇದ್ದಲ್ಲೇ ಇದ್ದಳು. ಸುಲಭಕೋಪನಾದ ಋಷಿಯು "ಯಾರಲ್ಲಿ ಮನವೂರಿ ಬಂದ ತಪೋಧನನನ್ನು ತಿಳಿಯದೆ ಇರುವೆಯೋ ಆತನು ನೀನು ಬೋಧಿಸಿದರೂ ಪ್ರಮತ್ತನಾಗಿ ಸ್ಮರಿಸದೆ ಇರುವನು." ಎಂದು ಶಪಿಸಿ ಹೊರಡಲು ಅನುವಾದನು. ಪ್ರಿಯಂವದೆ ಇದನ್ನು ಕೇಳಿ ಮುನಿಯಲ್ಲಿಗೆ ಓಡಿ ಬಂದು ಕಾಲುಗಳಲ್ಲಿ ಬಿದ್ದು ಕ್ಷಮೆ ಕೇಳಿಕೊಂಡಳು. ಅಭಿಜ್ಞಾನ ದರ್ಶನದಿಂದ ನೆನವರಿಕೆಗೊಳ್ಳುವನೆಂದು ಶಾಪದ ಹುರಿವಚನ ಬಂದಿತು. ರಾಜನು ಉಂಗುರ ತೊಡಿಸಿ ಹೋದದ್ದು ನೆನಪಿಗೆ ಬಂದು ಅಲ್ಲಿಗೆ ಶಾಂತಳಾದಳು.

ಶಕುಂತಲೆಯು ಗಾಂಧರ್ವ ವಿವಾಹಗೊಂಡುದು ಕಣ್ವನಿಗೆ ತಿಳಿವಿಗೆ ಬಂದಿತು. ಕೂಡಲೇ ಪತಿಗೃಹಕ್ಕೆ ಕಳುಹಿಕೊಡಲಿರುವ ಮನಗೊಂಡು ಅದಕ್ಕಿರುವ ಅಣಿ ಮಾಡಿದನು. ಮಗಳಿಗೆ ಗೃಹಸ್ಥ ಧರ್ಮದ ಸದುಪದೇಶ ವಚನವನ್ನು ಕೊಟ್ಟು ಹರಕೆಗೂಡಿ ಶಿಷ್ಯರೊಡಗೂಡಿ ಹಸ್ತಿನಾವತಿಗೆ ಕಳುಹಿಸಿ ಕೊಟ್ಟನು. ಕಣ್ವನು ವನವಾಸಿಯಾಗಿದ್ದು ಗೃಹಸ್ಥನಂತೆ ಕಳವಳಗೊಂಡನು.

ಶಾಂರ್ಙ್ಗರವ ಶಾರದ್ವತ ಮತ್ತು ಗೌತಮಿಯರೊಡಗೂಡಿ ಹಸ್ತಿನಾವತಿಗೆ ಶಕುಂತಲೆ ತೆರಳಿದಳು. ರಾಜಾಸ್ಥಾನಕ್ಕೆ ಸೇರಿದರು. ಮುನಿ ಸಂದೇಶವನ್ನು

ಸಾರಿದರು. ದುಷ್ಯಂತನು ಶಕುಂತಲೆಯ ಮದುವೆಯನ್ನು ಅಲ್ಲಗಳೆದನು. ಶಕುಂತಲೆ ಬೆಡಗಿನಿಂದ ತುಂಬಿದ ಅಂತರ್ವತ್ನಿಯಾಗಿದ್ದು ದುಷ್ಯಂತನಿಂದ ಧಿಕ್ಕೃತಳಾದಳು. ಅಭಿಜ್ಞಾನವನ್ನು ಕಳೆದುಕೊಂಡ ಶಕುಂತಳೆ ಮಾತಿನಿಂದ ಮದುವೆಯ ನಂಬುಗೆಯ ಮಾತನ್ನು ದುಷ್ಯಂತನಿಗೆ ಹೇಳತೊಡಗಿದಳು. ಅದೂ ಪರಿಣಾಮಕಾರಿಯಾಗಲಿಲ್ಲ. ಪುರೋಹಿತನ ಮಧ್ಯಸ್ಥಿಕೆ ನಡೆಯಿತು. ಸ್ವಭಾಗ್ಯವನ್ನು ಹಳಿದು ಆಸ್ಥಾನದಿಂದ ಹೊರಟ ಶಕುಂತಳೆ ತಾಯಿಯ ಕರುಣೆಗೆ ಪಾತ್ರಳಾದಳು. ಮುನಿ ಶಿಷ್ಯರಿಂದ ಪರಿತ್ಯಕ್ತಳಾದ ಶಕುಂತಳೆಗೆ ತಾಯಿಯಿಂದ ನೆಲೆ ದೊರೆಯಿತು. ದಿನಗಳುರುಳಿದುವು.

ದುಷ್ಯಂತನಲ್ಲಿಗೆ ರಾಜ ಕರ್ಮಚಾರಿಗಳು ಬೆಸ್ತನೊಬ್ಬನನ್ನು ಹಿಡಿದು ತಂದರು. ಅವನಲ್ಲಿ ರಾಜನ ಮೊಹರದ ಉಂಗುರ ದೊರೆತುದೇ ಇದಕ್ಕೆ ಕಾರಣವಾಗಿದ್ದಿತು. ಶಚೀ ತೀರ್ಥದಲ್ಲಿ ಮಿಂದ ಶಕುಂತಳೆಯ ಕೈಯಿಂದ ಉಂಗುರ ಜಾರಿ ಮೀನಿನ ಹೊಟ್ಟೆಯನ್ನು ಸೇರಿದ್ದಿತು. ಮೀನುಗಾರನಾದ ಧೀವರನಿಗೆ ಮೀನಿನ ಹೊಟ್ಟೆಯಲ್ಲಿ ಆ ಉಂಗುರ ದೊರಕಿತು. ರಾಜನಾದ ದುಷ್ಯಂತನಿಗೆ ತಾನು ಶಕುಂತಳೆಗೆ ತೊಡಿಸಿದ ಉಂಗುರವೆಂದು ಸ್ಮರಣೆಗೆ ಬಂದಿತು. ಶಕುಂತಳೆಗೆ ತಾನು ಮಾಡಿದ ಅಪರಾಧ ಅಸಹನೀಯವಾದುದೆಂದು ಮನಸ್ಸಿಗೆ ಬಂದು ಹೃದಯದಲ್ಲಿಯೇ ಖಿನ್ನನಾದನು. ರಾಜ್ಯ ವಿಷಯದಲ್ಲಿ ಯಾವ ಉತ್ಸಾಹವಿಲ್ಲದೆ ಎಲ್ಲಾ ಚಟುವಟಿಕೆಗಳಿಂದಲೂ ಹಿಂದುಳಿದನು. ಮಂತ್ರಿಗಳಿಂದಲೇ ರಾಜ್ಯಾಧಿಕಾರ ನಡೆಯುತಿತ್ತು. ದುಷ್ಯಂತನನ್ನು ಆತನು ಮಾಡಿದ ತಪ್ಪು ಕೊರೆಯುತಿತ್ತು. ಇಂದ್ರನಿಂದ ಯುದ್ಧವೊಂದಕ್ಕೆ ಕರೆ ಬಂದಿತು. ಅಲ್ಲಿಗೆ ತೆರಳಿದನು. ಯುದ್ಧದಲ್ಲಿ ಗೆಲವಡೆದನು. ವಜ್ರಾಯುಧನು ದುಷ್ಯಂತನನ್ನು ಸನ್ಮಾನಿಸಿದನು. ಇಂದ್ರನ ಅರ್ಧಾಸನ ದೊರಕಿತು. ಅಲ್ಲಿಂದ ಮರಳಿ ಬರುವ ಹೊತ್ತು ಕಶ್ಯಪನ ಆಶ್ರಮಕ್ಕೆ ಬಂದನು. ಕಶ್ಯಪ ಸುರಾಸುರ ಗುರು. ಸಪತ್ನೀಕನಾಗಿ ತಪಸ್ಸು ಮಾಡುತಿದ್ದ ಆತನನ್ನು ಸಂದರ್ಶಿಸುವ ಮನ ಬಂದು ಮಾತಲಿಯು ಸಮಯವನ್ನು ಕೇಳಹೋದನು.

ಇತ್ತ ದುಷ್ಯಂತನು ಅಶೋಕವೃಕ್ಷದ ಅಡಿಯಲ್ಲಿ ಮಾತಲಿಯ ಆಗಮನವನ್ನು ನಿರೀಕ್ಷಿಸ ತೊಡಗಿದನು. ಇದೇ ವೇಳೆಯಲ್ಲಿ ಬಾಲಕನೊಬ್ಬನು ಹೆಣ್ಣು ಸಿಂಹದ ಮೊಲೆ ಕುಡಿಯುತಿದ್ದ ಸಿಂಹಶಿಶುವನ್ನು ಬಲಾತ್ಕರಿಸುತ್ತಿರುವುದು ದುಷ್ಯಂತನಿಗೆ ಕಾಣಬಂದಿತು. ತಾಪಸೆಯರು ಬಾಲಕನನ್ನು ತಡೆದರು. ಆದರೂ ಆ ಹುಡುಗ ಆ ಹೆಂಗಳ ಹತೋಟಿಗೆ ಬರುತ್ತಿದ್ದಿಲ್ಲ. ಇದನ್ನು ಕಂಡ

ದುಷ್ಯಂತನಿಗೆ ಈ ಮಗುವು ಯಾರದಿರಬಹುದು? ಇಂತೇಕೇ ಆಶ್ರಮ ವಿರುದ್ಧ ವೃತ್ತಿ ಎಂಬ ವಿಚಾರದೊಂದಿಗೆ ಶಕುಂತಲೆಯ ಸ್ಮರಣೆ—ಅನಪತ್ಯತೆಯ ಭಾವ ಎಲ್ಲಾ ಒಂದಾಗಿ ಬಂದವು. ಹುಡುಗನ ವಿಷಯವಾಗಿ ಪ್ರಶ್ನಿಸ ಹೊರಟು ತನ್ನ ಜೀವನ ಚರಿತ್ರೆಯೇ ಆತನಿಗೆ ದೊರಕಿತು. ಮೃತ್ತಿಕಾ ಮಯೂರ (ಮಣ್ಣ ನವಿಲು) ರಕ್ಷಾ ಕರಂಡಕ ಇವುಗಳ ಸಂವಿಧಾನ ಘಟನೆ ತಾಪಸಿಯರಂತೆ ದುಷ್ಯಂತನಲ್ಲಿಯೂ ಒಂದು ಬಗೆಯ ಭಾವನಾ ವಿಶೇಷಗಳನ್ನು ಮೂಡಿಸಿದವು. ಹೆತ್ತವರೂ ಕಶ್ಯಪನೂ ಹೊರತು ಉಳಿದವರು ರಕ್ಷಾ ಕರಂಡ ಕವನ್ನು ಮುಟ್ಟಿದರೆ ಸರ್ಪದಂಶನವನ್ನು ಅದರಿಂದ ಕೂಡಲೇ ಹೊಂದು ತಿದ್ದರು. ಈ ಸೋಜಿಗ ಘಟನೆಯನ್ನು ಕಂಡು ತಾಪಿಸಿಯರಿಂದ ಶಕುಂತಲೆಯ ವರೆಗೆ, ಆ ಸುದ್ದಿ ಮುಟ್ಟಿ ಆಕೆಯು ಅಲ್ಲಿಗೆ ಬಂದಳು. ಪುನಃ ಶಕುಂತಲಾ ದುಷ್ಯಂತರ ಮಿಲನವಾಯಿತು. ಪತ್ನೀ ಪುತ್ರರೊಡಗೂಡಿ ಕಶ್ಯಪನನ್ನು ಸಂದರ್ಶಿಸಿ ಅವರಿಂದ ಹರಕೆಗೊಂಡು ದುಷ್ಯಂತನು ತನ್ನ ರಾಜಧಾನಿಗೆ ಮರಳಿದನು. ಇದು ಶಾಕುಂತಲದ ಕತೆ:

ಕಾಳಿದಾಸನು ಇಲ್ಲಿ ಲೋಕ ಚರಿತ್ರವನ್ನು ಚಿತ್ರಿಸಿದ್ದಾನೆ. ದುಷ್ಯಂತ ನೆಂಬ ರಾಜನು ಕಣ್ವನ ಆಶ್ರಮಕ್ಕೆ ಬಂದನು. ಆಕೆಯ ಲಾವಣ್ಯ ರಾಶಿಗೆ ಮರುಳಾದನು. ಶಕುಂತಲೆ ಆಶ್ರಮದ ಬಾಲಿಕೆ. ಪ್ರಾಯಪ್ರಬುದ್ಧೆ. ಈಕೆ ಯನ್ನು ದುಷ್ಯಂತನು ಮಾತಿನಿಂದ ಮರುಳುಗೊಳಿಸಿದನು. ತಾರುಣ್ಯದ ಭರ ದಲ್ಲಿ ವಿವಾಹಕ್ಕೆ ಯೋಗ್ಯವಾದ ವಯಸ್ಸಿನಲ್ಲಿ ಆಶ್ರಮದ ಬಾಲಿಕೆ ಆತನ ಸಂಪರ್ಕವನ್ನು ಹೊಂದಿದಳು. ದುಷ್ಯಂತನು ಉಂಗುರ ಕೊಟ್ಟಿದ್ದನು. ಅದು ಇಂದಿನ ರಿಜಿಸ್ಟ್ರಿ ಸಂಪ್ರದಾಯಕ್ಕೆ ಸೇರಿದ ರಾಜಾಭಿಜ್ಞಾನವಾಗಿತ್ತು. ಅದು ಆಕೆಯ ಕೈಯಿಂದ ತಪ್ಪಿತು. ತಪ್ಪಿ ಕಷ್ಟಕ್ಕೆ ಈಡಾದಳು. ರಿಜಿಸ್ಟ್ರಿಯ ವಿವಾಹ ನಡೆಸಿ ಆ ಮೇಲೆ ಆ ರಿಜಿಸ್ಟ್ರಿಯ ಪುಸ್ತಕವನ್ನೇ ಸುಡಿಸಿ ಕಷ್ಟಕ್ಕೊಳ ಪಡಿಸಿದ ರಿಜಿಸ್ಟ್ರಿಯ ಮದುವೆಯಾಯಿತು. ಸಂತಾನಾಭಿಲಾಷೆಯಿಂದ ಪುನಃ ಶಕುಂತಲೆಯನ್ನು ಸ್ವೀಕರಿಸಿದನು, ಎಂಬುದನ್ನು ಕಾಳಿದಾಸನು ಚಿತ್ರಿಸುತ್ತಾನೆ.

ಧನಿಕರು ಚೆಲು ಹುಡುಗಿಯರನ್ನು ಇದೇ ರೀತಿ ಮೋಸಗೊಳಿಸುತ್ತಿರು ವುದು ಕಣ್ಣಾರೆ ಕಾಣುವ ದೃಶ್ಯ. ಹಲವಾರು ಮಹಿಳಾಶ್ರಮ ಪಾಠಶಾಲೆ ಗಳಲ್ಲಿ ಇಂತಹ ಘಟನೆಗಳು ಇಂದೂ ನಡೆಯುತ್ತಲೇ ಇವೆ. ದುಷ್ಯಂತನಂತೆ ರಾಜಸಂಪತ್ತಿನ ಧನ ಕುಬೇರರ ಮಕ್ಕಳು ಇಂತಹ ಚರ್ಯೆಗೊಂಡವರಾಗಿರು ತ್ತಾರೆ. ಹುಡುಗಿಯರ ತಾರುಣ್ಯವನ್ನು ಕೆಡಿಸುವುದೇ ಇಂತಹರ ಜೀವನ

ಚರ್ಯೆ. ಹಲವರು ಬಡಕುಟುಂಬದ ನಿರ್ಗತಿಕ ಅನಾಥೆಯರಾದ ಬಾಲಕಿ ಯರಿರುವರು. ಚೆಲುವಿನಿಂದ ತುಂಬಿರುತ್ತಾರೆ. ಮಾತಿನಿಂದ ಮರುಳುಗೊಳಿಸಿ ಗಾಂಧರ್ವ ವಿವಾಹವನ್ನು ಸಾಧಿಸುವರು. ಹುಡುಗಿಯರ ತಾರುಣ್ಯವೇ ಹಾಳಾಗಿ ಜೀವನದಿಂದ ಕೆಡುತ್ತಿರುವರು. ಅಭಿಜ್ಞಾನದ ಉಂಗುರದ ಒಂದು ರಿಜಿಸ್ಟ್ರಿಯ ಮದುವೆಯನ್ನು ದೂರದಿಂದ ಬಂದ ಧನಕುಬೇರರು ನಡೆಸಿ ಹೋಗಿ ಬಿಡುತ್ತಾರೆ. ಮುಂದೆ ಅವರಲ್ಲಿಗೆ ಹೋದರೆ ಅದಕ್ಕೆ ಸಾಕ್ಷಿ ಹೇಳುವರಾರು. ಯಾವುದಾದರೂ ಒಂದು ಊರಿನ ಹೆಸರು ಕೊಟ್ಟು ಮದುವೆ ನಡೆಯುವುದು. ಆ ಮುಂದೆ ಅವರನ್ನು ಕರಕೊಂಡು ಹೋಗುವ ವಿಚಾರ ಅವರಿಗಿಲ್ಲ. ತರುಣಿ ಯರ ಯೌವನವನ್ನು ಕೆಡಿಸುವುದೇ ಉದ್ದೇಶ. ತರುಣಿಯರು ಅವರ ಸಂಪ ತ್ತಿನ ಮಾಯಾಜಾಲಕ್ಕೆ ಸಿಲುಕಿ ಜೀವನದಲ್ಲಿ ಬನ್ನವನ್ನು ಅನುಭವಿಸುವರು. ಇಂತಹ ಘಟನೆಯ ಒಂದು ಉತ್ತಮ ನಾಟಕ ಕಾಳಿದಾಸನಿಂದ ಕೊಡಲಾಗಿದೆ.

ಕಾಳಿದಾಸನ ಈ ನಾಟಕ ಎಲ್ಲರಿಗೂ ಅಚ್ಚುಮೆಚ್ಚಿನದು. ಶೃಂಗಾರ ಪ್ರಧಾನವಾದ ನಾಟಕವಾದ್ದರಿಂದ ಇದು ಶ್ರೇಯಸ್ಸನ್ನು ಪಡೆದುದಲ್ಲ. ಶೃಂಗಾರ ರಸ ಚರಿತ್ರೆ ಈ ರೀತಿಯಲ್ಲಿ ಲೋಕದಲ್ಲಿ ನಡೆಯುತಿದ್ದು ಅದನ್ನು ಸಮಾಜಕ್ಕೆ ತೋರಿಸಿ ನಾರೀ ಸಮಾಜಕ್ಕೂ ಜನತೆಗೂ ಕಾಳಿದಾಸನು ಎಚ್ಚರಗೊಟ್ಟಿದ್ದಾನೆ. ಬಂಧು ಬಾಂಧವರಿರದ ವಿವಾಹ ಘಟನೆಯಿಂದ ಇದೇ ಸ್ಥಿತಿ ನಾರೀ ಸಮಾ ಜಕ್ಕೆ ಉಂಟಾಗುತ್ತದೆ. ಗುರುಜನರ ಮುಂದೆ ಬಂಧುಜನರ ಕೂಡಿಕೆಯಿಂದ ನಡೆವ ವಿವಾಹ ಸಮಿಾಚೀನ. ಅತಿರಿಕ್ತವಾದ ವಿವಾಹವನ್ನು ನಡೆಸಿದರೆ ಈ ಪರಿಸ್ಥಿತಿಯು ಉಂಟಾಗುತ್ತಿರುವುದು.

ದುಷ್ಯಂತನು ಕೊನೆಗೆ ಸಂತಾನಾರ್ಥಿಯಾಗಿ ಶಕುಂತಲೆಯನ್ನು ಸ್ವೀಕರಿ ಸಿದನು. ಧನಕುಬೇರರು ಸಂತಾನ ಚಿಂತೆ ಬಂದಾಗ ದತ್ತಪುತ್ರರನ್ನು ಸ್ವೀಕ ರಿಸುವರು. ಹಣ ರಾಜ್ಯಾಭಿಲಾಷೆ–ದೊರೆತನದ ಅಭಿಲಾಷೆಗಳಿಂದ ತುಂಬಿದ ಅದಕ್ಕಾಗಿ ಕೊರಗುತ್ತಿದ್ದ ದುಷ್ಯಂತನು ಸಂತಾನಾಪೇಕ್ಷಿಯಾಗಿ ಶಕುಂತಲೆ ಯನ್ನು ಸ್ವೀಕರಿಸಿದನು.

ಕಾಳಿದಾಸನು ಇಲ್ಲಿ ಲೋಕಕ್ಕೆ ಇನ್ನೊಂದು ತರಹದ ಸಂದೇಶ ಕೊಟ್ಟಿ ದ್ದಾನೆ. ಮಕ್ಕಳು ಮರಿಗಳುಳ್ಳ ಧನ ಕುಬೇರರು ಈ ರೀತಿಯಿಂದ ನಡೆಸಿದ ವಿವಾಹವನ್ನು ಮತ್ತೆ ಮನಸ್ಸಿಗೆ ತರುವಂತಿಲ್ಲ. ಬಾಲಿಕೆಯರ ಜೀವನ ನಿರ ರ್ಥಕವಾಗುವುದು. ಬಾಲಿಕೆಯರ ತಾರುಣ್ಯವು ಕೆಟ್ಟು ಅವರು ದೂಷಿತೆಯ ರೆನಿಸುತ್ತಾರೆ. ಈ ದೂಷಣೆಯ ಹುಟ್ಟು ಅವರಿಂದಲೇ ಮೊದಲು ಉಂಟಾಗು

ತ್ತದೆ. ನಾರೀ ಸಮಾಜದ ಜೀವನದಲ್ಲಿ ಕಳಂಕ ಇವರಿಂದ ಹುಟ್ಟಿ ಅದು ಬಗೆಹರಿಯದೆ ಹಾಗೇ ಉಳಿಯಬಹುದು. ಜನಸಮಾಜ ಈ ವಿಷಯದಲ್ಲಿ ಎಚ್ಚರವಾಗಿರಬೇಕು. ದುಷ್ಯಂತನಂತೆ ಇಂದು ಹಲವರಿದ್ದಾರೆ. ಅವರ ಕಡೆಗೆ ಕಣ್ಣನ್ನು ಕೆರಳಿರಿಸಿರಿ. ನಾರಿಯರು ತಮ್ಮ ಜೀವನವನ್ನು ಸಫಲಗೊಳಿಸ ಬೇಕಾದರೆ ಗಾಂಧರ್ವ ವಿವಾಹಕ್ಕೆ ಎರವಾಗಕೂಡದು. ದುಷ್ಯಂತನಂತಹ ಮನುಷ್ಯರು "ಅಯಮಾಚರತ್ಯ ವಿನಯಂ ಮುಗ್ಧಾಸು ತಪಸ್ವಿಕನ್ಯಾಸು" ಎಂದು ಬೆರಳು ತೋರಿ, ಕಾಳಿದಾಸನು ಮುಗ್ಧೆಯರಾದ ತಪಸ್ವಿನಿಯರಾದ ಬಾಲಿಕೆಯ ರಲ್ಲಿ ಅವಿನಯವನ್ನು ಮಾಡುತ್ತಿರುವುದನ್ನು ಸ್ಪಷ್ಟವಾಗಿ ಕಾಣಿಸಿಕೊಟ್ಟಿದ್ದಾನೆ.

"ಛಾಯಾ ನ ಮೂರ್ಛತಿಮಲೋಪ ಹತ ಪ್ರಸಾದೇ ಶುದ್ಧೇತು ದರ್ಪಣ ತಲೇ ಸುಲಭಾವಕಾಶಾ" ಎಂದು ಮಾನವನ ಕಲುಷಿತ ಮನೋದರ್ಪಣ ಚಿತ್ರಸ್ಥಿತಿಯನ್ನು ಕಾಳಿದಾಸನು ಹೇಳಿದ್ದಾನೆ. ಮಲದಿಂದ ಆವರಿಸಿದ ಕನ್ನಡಿ ಯಲ್ಲಿ ಪ್ರತಿಬಿಂಬ ಬಿಂಬಿಸದಂತೆ ಶುದ್ಧವಲ್ಲದ ಮನಸ್ಸಿನವರ ವಿವಾಹ ಸಂಪರ್ಕ ಜೀವನದ ಬಿಂಬ ಪ್ರಾಪ್ತಿಗಾಗುವುದಿಲ್ಲ. ಶುದ್ಧವಾದ ದರ್ಪಣ ಬೇಕಿದೆ. ಮನಸ್ಸಿನಲ್ಲಿ ಕೊಳೆಯಿರದ ನೈರ್ಮಲ್ಯ ಜೀವನದವರ ಸಂಯೋಗ ನಾರಿಯರಿಗೆ ಬೇಕು. ಇದರಿಂದ ಜೀವನ ಸುಖ ಸುಲಭವಾಗಿ ಉಂಟಾಗುವುದು. ಅನ್ಯಥಾ ಕಷ್ಟವಾಗುವುದು ಎಂದು ಕಾಳಿದಾಸನು ಲೋಕ ಚರಿತ್ರವನ್ನು ಚಿತ್ರಿಸಿ ಶೃಂಗಾರ ರಸ ಪ್ರಧಾನ ಜೀವಿಗಳಿಗೆ ಯೋಗ್ಯವಾದ ಒಂದು ಕತೆಗೊಟ್ಟು ಜೀವನದಲ್ಲಿ ಎಚ್ಚರಗೊಂಬಂತೆ ಮಾಡಿದ್ದಾನೆ. ಇದರಿಂದ ಈ ಶೃಂಗಾರ ರಸದ ನಾಟಕ ಸರ್ವೋತ್ಕೃಷ್ಟವೆನಿಸಿದೆ. ಜೀವನ ಚಿತ್ರವನ್ನು ಚಿತ್ರಿಸಿ ಆದರ್ಶಬೋಧೆಗೆ ಎಡೆಗೊಡುವ ಶಾಕುಂತಲಾ ನಾಟಕ ಇಂದೂ ಅನು ಪಮ. ಅಮೋಘ ಕಾವ್ಯ ಸಂದೇಶ ವಸ್ತು. ಎಂದೂ ಅಜರಾಮರವಾದ ಬೋಧಾಪರ ಕವಿ ಸಂದೇಶ ರೂಪಿತ ನಾಟಕ. ಪ್ರಣಯ ಮಾರ್ಗಕ್ಕೆ ಬೆಳ ಕನ್ನೀವ ನಾಟಕರೂಪ ದೀಪಿಕೆ.



# ಶಾಕುಂತಲದ ನಾಲ್ನುಡಿಯಿಂದ ವಿಶ್ವವಿಶ್ರುತನಾದ ಕಾಳಿದಾಸ

ಅಭಿಜ್ಞಾನ ಶಾಕುಂತಲ ನಾಟಕದ ಕುರಿತು ಲೋಕದ ವಿಶಿಷ್ಟ ಭಾಷೆಗಳಲ್ಲೆಲ್ಲಾ ಪ್ರಶಂಸೆಯ ನುಡಿಗಳು ಬಂದಿವೆ. ಈ ಗ್ರಂಥದ ಮನೋಹರತೆ ನೈಜಲಾವಣ್ಯ ರಸವೃತ್ತಿ ಮೊದಲಾದುವುಗಳಿಗೆ ಮೆಚ್ಚಿ ಸ್ವರ್ಗೀಯ ಬೆಡಗನ್ನು ಇದರಲ್ಲಿ ಕಾಣುವೆವೆಂದು ಹಲವಾರು ವಿಮರ್ಶಕರು ನುಡಿದಿದ್ದಾರೆ. ನಾಟಕ ವಿಮರ್ಶಕನೊಬ್ಬನು

ಕಾವ್ಯೇಷು ನಾಟಕ ರಮ್ಯಂ ತತ್ರಾಪಿಚ ಶಕುಂತಲಾ।
ತತ್ರಾಪಿಚ ಚತುರ್ಥೋಂಕಃ ತತ್ರ ಶ್ಲೋಕ ಚತುಷ್ಟಯಂ॥

ಎಂದು ಬಾಯ್ಬಿಟ್ಟು ಕೊಂಡಾಡಿದ್ದಾನೆ. ಕಾವ್ಯಗಳಲ್ಲಿ ನಾಟಕವೇ ಚೆಲುವಾದುದು. ಅವುಗಳಲ್ಲಿಯೂ ಶಕುಂತಲಾ ನಾಟಕ ಪರಮಸುಂದರ. ಈ ನಾಟಕದಲ್ಲಿಯೂ ನಾಲ್ಕನೆಯ ಅಂಕ ಅತಿ ವಿಶಿಷ್ಟ. ನಾಲ್ಕನೆಯ ಅಂಕದಲ್ಲಿಯೂ ನಾಲ್ಕು ನುಡಿಗಳು ಅತಿ ರಮ್ಯಗಳು; ಎಂದು ಮೇಲಿನ ಪದ್ಯದ ಸಾರ.

ನಾಟಕಗಳಿಗೆ ಕಾವ್ಯಗಳಲ್ಲಿ ಹಿರಿಯ ಸ್ಥಾನ. ದೃಶ್ಯ ಕಾವ್ಯಗಳ ಕುರಿತು ಪಂಚಮ ವೇದವೆಂದೇ ಪ್ರಾಚೀನರ ಸಿದ್ಧಾಂತ. ಈ ಸಿದ್ಧಾಂತ ಹುರುಳಿಲ್ಲದುದಲ್ಲ. ಜನರನ್ನು ಮಾರ್ಗಕ್ಕೆ ತರಲು ನಾಟಕಗಳು ಸಹಾಯಕಗಳಾಗುವಂತೆ ಇನ್ನಿತರ ಗ್ರಂಥಗಳು ಸಹಾಯಕಗಳೆನಿಸವು. ಜನಾದರಣೆಯ ದೃಷ್ಟಿಯಿಂದ ಮಾತ್ರವಲ್ಲ ಬೋಧನೆಗಿರುವ ಸುಲಭ ಶಕ್ತಿಯಿಂದ ನಾಟಕಕ್ಕೇ ಕಾವ್ಯಗಳಲ್ಲಿ ಹಿರಿದಾದ ಸ್ಥಾನ ಇದರಿಂದಲೇ "ನಾಟಕಾಂತಂಕವಿತ್ವಂ" ಎಂಬ ನುಡಿಯು ಹಬ್ಬಿದೆ. ಕವಿ ಭಾವನೆಯಿಂದ ಲೋಕವನ್ನು ತಿದ್ದಲು ನಾಟಕವೇ ಅಂತಿಮ ಸಾಧನ; ಎಂಬ ವಿಚಾರವೂ ಈ ನುಡಿಯಿಂದ ಹೊರಹೊಮ್ಮುತ್ತಿದೆ.

ಕಾಳಿದಾಸನು ಶಕುಂತಲಾ ನಾಟಕದಿಂದ ಲೋಕಕ್ಕೆ ಕೊಟ್ಟ ಬೋಧೆ ಹಿರಿದು. ಗೃಹಸ್ಥ ಧರ್ಮದ ಸಂಪೂರ್ಣ ಚಿತ್ರ ಶಾಕುಂತಲಾ ನಾಟಕದ ನಾಲ್ಕನೆಯ ಅಂಕದಲ್ಲಿ ಕಂಡುಬರುವಂತೆ ಇನ್ನಾವ ನಾಟಕದಲ್ಲಿಯೂ ಕಾಣಲಾರೆವು. ಕಣ್ವನು ವನೌಕಸನಾಗಿದ್ದು ಇಲ್ಲಿ ಗೃಹಸ್ಥ ಧರ್ಮವನ್ನು ಹೊಂದಿರುತ್ತಾನೆ. ಕಣ್ವನ ಸಾಕು ಮಗಳು ಶಕುಂತಲೆ. ಅರಣ್ಯದ ಸಮಿಧೆಗೆ ಹೊರಟ ಕಣ್ವ ಮುನಿಗೆ ವಿಶ್ವಾಮಿತ್ರ ಮೇನಕೆಯರಿಂದ ಪರಿತ್ಯಕ್ತವಾದ ಹೆಣ್ಣು ಶಿಶು ದೊರಕಿತು. ಅಳುತಿದ್ದ ಮಗುವನ್ನು ಶಕುಂತ ಪಕ್ಷಿಗಳು ಆರೈಕೆಗೊಳ್ಳುತಿದ್ದುವು.

ವಿಶ್ವಕುಟುಂಬಿಯಾದ ಕಣ್ವನು ಅಪತ್ಯಸ್ನೇಹದಿಂದ ತುಂಬಿ ಆ ಶಿಶುವನ್ನು ತಬ್ಬಿಕೊಂಡನು. ಶಕುಂತಗಳಿಂದ ಲಾಲಿತಳಾದ ಆಕೆಯನ್ನು ಶಕುಂತಲೆ ಯೆಂದೇ ನಾಮಕರಣ ಮಾಡಿದನು. ಎಳೆ ಹೆಣ್ಣು ಮಗು ಕಣ್ವನ ಆಶ್ರಯದಲ್ಲಿ ಬಳೆಯತೊಡಗಿದಳು. ಪ್ರಾಯ ಪ್ರಬುದ್ಧಳೆನಿಸಿದಳು. ಕಣ್ವನು ಸೋಮ ತೀರ್ಥಕ್ಕೆ ತೆರಳಿದ್ದನು. ಆ ವೇಳೆಯಲ್ಲಿ ಶಕುಂತಲಾ ದುಷ್ಯಂತರ ಪ್ರಣಯ ಸಂಪರ್ಕವಾಯಿತು. ಕಣ್ವನು ಇದನ್ನರಿತನು. ಹೆಣ್ಣು ಹೆರವರ ಸೊತ್ತು ಆಕೆಯನ್ನು ಅದರ ಯಜಮಾನನಿಗೆ ಕೊಟ್ಟು ನಿಶ್ಚಿಂತನಾಗುವೆನೆಂಬ ಭಾವನೆ ಗೂಡಿ ಪತಿಗೃಹಕ್ಕೆ ಕಳುಹಿಸಿ ಕೊಡುವ ಅಣಿಮಾಡತೊಡಗಿದನು. ಗೆಳತಿ ಯರು ಶಕುಂತಳೆಯನ್ನು ಉಡುಗೆ ತೊಡುಗೆಗಳಿಂದ ಸಿಂಗರಿಸಿದರು. ಸಾಕು ಮಗಳನ್ನು ಕಳುಹುವ ಹೊತ್ತು ಅವನಿಗೆ ಉಂಟಾದ ಅವಸ್ಥೆಯನ್ನು ತಾನೇ ಹೇಳ ತೊಡಗಿದನು.

'ಯಾಸ್ಯತ್ಯದ್ಯ ಶಕುಂತಲೇತಿ ಹೃದಯಂ ಸಂಸ್ಪೃಷ್ಟಮುತ್ಕಂಠಯಾ
ಕಂಠಃ ಸ್ತಂಭಿತ ಬಾಷ್ಪವೃತ್ತಿ ಕಲುಷಶ್ಚಿಂತಾಜಡಂದರ್ಶನಂ
ವೈಕ್ಲವ್ಯಂ ಮಮತಾವದೀದೃಶಮಿದಂ ಸ್ನೇಹಾದರಣ್ಯೌಕಸಃ
ಪೀಡ್ಯಂತೇ ಗೃಹಿಣಃ ಕಥಂ ನ ತನಯಾ ವಿಶ್ಲೇಷದುಃಖೈರ್ನವೈಃ॥

ಈಗಲೇ ಶಕುಂತಲೆಯು ಹೋಗುವಳು. ಇದರಿಂದ ಹೃದಯವು ಕಳವಳ ಗೂಡಿದೆ. ಕುತ್ತಿಗೆ ಬಿಗಿಹಿಡಿದಿದೆ. ಕಣ್ಣು ಚಿಂತೆಗೊಂಡು ನೀರಿಳಿದು ಮಂದ ಗಟ್ಟಿದೆ. ಕಾಡ ಮನೆಯಲ್ಲಿ ಜೀವಿಸುವ ನನಗೆ ಸ್ನೇಹದಿಂದ ಈ ರೀತಿಯ ಅಳಲು ಉಂಟಾಗುತ್ತಿರಲು ಗೃಹಸ್ಥರು ಹೆಮ್ಮಕ್ಕಳ ಅಗಲಿನ ಹೊಸ ಸಂತಾಪ ದಿಂದ ಯಾವ ರೀತಿಯಿಂದ ಪೀಡಿತರಾಗುವರೋ? ಎಂದು ಕಣ್ವನು ಸಂತಾಪ ಗೊಳ್ಳುವನು.

ಶಕುಂತಳೆ ಆದೀಗಲೇ ಹೋಗುವಳು. ಹೊರಟಿಲ್ಲ. ಹೊರಡುವ ಮೊದಲೇ ಕಣ್ವನಿಗೆ ಉಂಟಾದ ಅವಸ್ಥೆ ಇದು. ಹೆತ್ತವರು ಮಗಳನ್ನು ಕೈ ಎತ್ತಿಕೊಡುವಾಗ ಎಷ್ಟು ವೇದನೆಗೊಳ್ಳಲಿಕ್ಕಿಲ್ಲ. ಪತಿ ಗುಣವಂತನೂ ಒಳ್ಳೆಯ ನಡತೆಯವನೂ ಆಗಿದ್ದರೆ ಮಾತ್ರ ಹೆಂಗೆಸಿನ ಜೀವನ ಸುಖ ಪೂರ್ಣ ವಾಗುವುದು.

ಕಣ್ವನು ಹೋಮಾಗ್ನಿಯ ಸುತ್ತು ಮಗಳನ್ನು ಬರಿಸಿ ಶುಭಾಶಂಸೆ ಗೊಂಡನು. ಆಶ್ರಮದ ಮರಗಿಡಗಳನ್ನು ಸಂಬೋಧಿಸಿ

"ಪಾತುಂ ನ ಪ್ರಥಮಂ ವ್ಯವಸ್ಯತಿಜಲಂ ಯುಷ್ಮಾಸ್ವಪೀತೇಷುಯಾ
ನಾದತ್ತೇ ಪ್ರಿಯ ಮಂಡನಾಪಿ ಭವತಾಂ ಸ್ನೇಹೇನ ಯಾ ಪಲ್ಲವಂ।
ಆದ್ಯೇ ವಃ ಕುಸುಮ ಪ್ರಸೂತಿ ಸಮಯೇ ಯಸ್ಯಾಭವತ್ಯುತ್ಸವಃ
ಸೇಯಂ ಯಾತಿ ಶಕುಂತಲಾ ಪತಿಗೃಹಂ ಸರ್ವೈರನುಜ್ಞಾಯತಾಂ॥"

"ಯಾವಳು ಮೊತ್ತ ಮೊದಲು ನಿಮಗೆ ನೀರ್ಗುಡಿಯಲಿತ್ತು ಆಮೇಲೆ ನೀರ್ಗುಡಿಯುವಳೋ, ತನಗೆ ಮೆಚ್ಚಿದ ಅಲಂಕರಣವಾಗಿದ್ದರೂ ನಿಮ್ಮಲ್ಲಿರುವ ಸ್ನೇಹದಿಂದ ಚಿಗುರನ್ನು ಚಿವುಟಳೋ, ನಿಮ್ಮಲ್ಲಿ ಹೊಸತಾಗಿ ಹೂತೋರಲು ಯಾವಳಿಗೆ ಹಬ್ಬದ ಸಂತೋಷವಾಗುವುದೋ, ಆ ಶಕುಂತಳೆ ಗಂಡನ ಮನೆಗೆ ಹೋಗುತ್ತಾಳೆ. ನೀವೆಲ್ಲರೂ ಅನುಜ್ಞೆಗೊಳ್ಳಿರಿ." ಎಂದು ಬೇಡಿಕೊಳ್ಳುವನು.

ಶಕುಂತಳೆ ಹೋಗುವ ಹೊತ್ತಿಗೆ ಕಣ್ವನ ಮನಸ್ಸಿನಲ್ಲಿ ಬಂದ ಈ ಚಿತ್ರ ಎಷ್ಟು ವಿಶಾಲ. ಮನೆಯಲ್ಲಿದ್ದ ಈ ಹೆಣ್ಣು ಮಗಳು ಸುಮ್ಮನಿರುತಿದ್ದಿಲ್ಲ. ಹೂ ಗಿಡ ಬಳ್ಳಿಗಳನ್ನು ನೆಟ್ಟಿದ್ದಾಳೆ. ನೀರೆರೆದು ಸಾಕಿದ್ದಾಳೆ. ಹೂ ಬಳ್ಳಿಗಳಲ್ಲಿ ಹೂ ಬಿಡಲು ಆಕೆಗೆ ಉಂಟಾಗುವ ಹರ್ಷಕ್ಕೆ ಮಿತಿ ಇರುತಿದ್ದಿಲ್ಲ. ಅದೊಂದು ಹಬ್ಬದ ದಿನವೇ ಆಗಿತ್ತು. ವನದ ಕುಸುಮದ ಬೆಡಗನ್ನು ಕಾಣಲು ಉತ್ತಮ ವನಸ್ಪತಿ ಶಾಸ್ತ್ರಜ್ಞಾನ ಬೇಕು. ಶಕುಂತಲೆ ಇದನ್ನು ಬಲ್ಲವಳಾಗಿದ್ದು ಜೀವನ ಸುಖ ತತ್ವವನ್ನು ತಿಳಿದವಳಾಗಿದ್ದಾಳೆ. ಸಾಮಾನ್ಯವಾಗಿ ಕನ್ನೆಯರು ಹೂ, ಚಿಗುರನ್ನು ಕಂಡಾಗ ಅದನ್ನು ಹರಿದು ತಲೆಯಲ್ಲಿ ಮುಡಗಿ ಸಂತೋಷಗೊಳ್ಳುವರು. ಶಕುಂತಳೆಯು ಅಂತಹಳಾಗಿದ್ದಿಲ್ಲ.

ದುಷ್ಯಂತನಿಗೆ ಸಂದೇಶ ವಚನವನ್ನು ಕಣ್ವನು ಆ ಮೇಲೆ ಕೊಡುವನು. ಆ ಮಾತು ಎಷ್ಟು ಅರ್ಥಪೂರ್ಣರುಚಿರ

ಅಸ್ಮಾನ್ ಸಾಧು ವಿಚಿಂತ್ಯ ಸಂಯಮಧನಾನುಚ್ಚೈಃ ಕುಲಂ ಚಾತ್ಮನ
ಸ್ತ್ವಯ್ಯಸ್ಯಾಃ ಕಥಮಪ್ಯಬಾಂಧವಕೃತಾಂ ಸ್ನೇಹಪ್ರವೃತ್ತಿಂಚತಾಂ।
ಸಾಮಾನ್ಯ ಪ್ರತಿಪತ್ತಿ ಪೂರ್ವಕಮಿಯಂ ದಾರೇಷು ದೃಷ್ಯಾತ್ವಯಾ
ಭಾಗ್ಯಯತ್ತಮತಃ ಪರಂ ನಖಲು ತದ್ವಾಚ್ಯಂ ವಧೂ ಬಂಧುಭಿಃ॥

ಸಂಯಮವೇ (ತಪಸ್ಸು) ಧನರಾಗಿರುವ ನಮ್ಮನ್ನು ಚೆನ್ನಾಗಿ ವಿಚಾರಿಸಿ, ತನ್ನ ಉಚ್ಚ ಕುಲದ ನೆಲೆಯನ್ನೂ ವಿಚಾರಿಸಿ, ನೀನು ಇವಳಲ್ಲಿ (ಶಕುಂತಲೆಯಲ್ಲಿ) ಬಾಂಧವರಿರದೆ ಮಾಡಿದ ಆ ಸ್ನೇಹ ವೃತ್ತಿಯನ್ನೂ ವಿಚಾರಿಸಿ ಸಾಮಾನ್ಯ ಗೌರವ ಪೂರ್ವಕ ಹೆಂಡಿರ ನೆಲೆಯಲ್ಲಿ ಈಕೆಯನ್ನು ಕಾಣತಕ್ಕದು. ಅದಕ್ಕಿಂತ ಹೆಚ್ಚಿನ ಸಂಕಲ್ಪ ಭಾಗ್ಯಾಧೀನ. ಅದು ವಧೂ ಬಂಧುಗಳಿಂದ ಹೇಳತಕ್ಕುದಲ್ಲವೆಂದು ಕಣ್ವನು ಸಂದೇಶಿಸುವನು.

ದುಷ್ಯಂತ ಚಕ್ರವರ್ತಿ. ಕಣ್ವ ತಪೋಧನರ ಶಕ್ತಿ ಎಷ್ಟೆಂದು ಆತನೇ ವಿಚಾರಿಸಬೇಕು. ವರದಕ್ಷಿಣೆ ಮೊದಲಾದ ವಿಚಾರವಿದ್ದರೆ ತಪೋಧನರೆಂದು ತಿಳಿದುಕೋ ಎಂಬ ಈ ಮಾತು ಎಷ್ಟು ವ್ಯಂಗ್ಯವಾಗಿದೆ. ರಾಜಕುಲ ದುಷ್ಯಂತನದು. ರಾಜಕುಲ ಸಂಭೂತನು ತನ್ನ ಕುಲಗೌರವವನ್ನು ಕಾದ ಕೆಲಸಕ್ಕೆ 'ಇಳಿಯುವುದು ಮುಖ್ಯ. ಅದನ್ನು ಮನಸ್ಸಿನಲ್ಲಿ ತಂದು ಕೊಂಬಂತೆ ಕಣ್ವ ಹೇಳುತ್ತಿರುವನು. ರಾಜನು ಬಂದು ಜನರು ಇಲ್ಲದ ವೇಳೆಯಲ್ಲಿ ನಡೆಯಿಸಿದ ವಿವಾಹಕರ್ಮ ಎಷ್ಟು ಉಚಿತವಾಗಿದೆ! ಅದನ್ನೂ ಎಣಿಸಿಕೋ ಎಂದು ಒತ್ತಿ ಹೇಳುತ್ತಿರುವನು. ಆ ಮೇಲೆ ಅಪ್ಪಣೆಯನ್ನೇ ಕಣ್ವನು ಕೊಡುತ್ತಾನೆ. ಸಾಮಾನ್ಯ ಗೌರವಪೂರ್ವಕ ಹೆಂಡಿರ ನೆಲೆಯಲ್ಲಿ ಈಕೆಯನ್ನು ಕಾಣತಕ್ಕದು' ಎಂಬ ಈ ನುಡಿಯಲ್ಲಿ ಶ್ಲೇಷವು ಇದೆ. ಸಾ (ಆ ಶಕುಂತಲೆಯು) ಮಾ (ಬೇಡ) ಅನ್ಯ (ಬೇರೆ ಎಂದು ವಿಂಗಡಿಸಿದಾಗ ಶಕುಂತಲೆಯಲ್ಲಿ ತಪ್ಪೆಣಿಕೆಗೊಳ್ಳುವುದು ಬೇಡವೆಂದಾಗುತ್ತದೆ. ಸಾ (ಶಕುಂತಲೆಯು) ಮಾನ್ಯ (ಮಾನ್ಯವಾದ ಗೌರವ) ದೃಷ್ಟಿಯಿಂದ ಕಾಣತಕ್ಕವಳಿದ್ದಾಳೆ. ಸಾಧಾರಣ ಗೌರವವನ್ನು ಆಕೆಗೆ ಸಲ್ಲಿಸಿದರೆ ಸಾಲದು. ಆಕೆ ರಾಣಿಯಾಗಬೇಕು ಎಂಬಿತ್ಯಾದಿ ವಿಚಾರಗಳನ್ನು ಹುಡುಗಿಯ ಸಂಬಂಧಿಕರು ಹೇಳುವುದು ಯುಕ್ತವಲ್ಲ. ಅದೆಲ್ಲಾ ಅದೃಷ್ಟದ ವಸ್ತು ಎಂದು ಕಣ್ವನು ದುಷ್ಯಂತನಿಗೆ ಎಚ್ಚರಗೊಡುವ ಸಂದೇಶವನ್ನೇ ಸಾರಿರುವನು.

ಲೋಕ ವ್ಯವಹಾರವನ್ನು ಬಲ್ಲ ಕಣ್ವನು ಮಗಳೊಡನೆ ಪತಿಗೃಹವನ್ನು ಸೇರಿ ಹೇಗೆ ನಡೆದುಕೊಳ್ಳಬೇಕೆಂದು ಆದೇಶಿಸುತ್ತಾನೆ. ಆ ಮಾತು ಇಂತಿದೆ.

ಶುಶ್ರೂಷಸ್ವ ಗುರೂನ್ ಕುರುಪ್ರಿಯಸಖೀ ವೃತ್ತಿಂ ಸಪತ್ನೀಜನೇ
ಭರ್ತುರ್ವಿಪ್ರಕೃತಾಪಿರೋಷಣತಯಾ ಮಾಸ್ಮಪ್ರತೀಪಂಗಮಃ
ಭೂಯಿಷ್ಠಂ ಭವದಕ್ಷಿಣಾ ಪರಿಜನೇ ಭಾಗ್ಯೇಷ್ವನುತ್ಸೇಕಿನೀ
ಯಾಂತ್ಯೇವಂ ಗೃಹಿಣೀ ಪದಂ ಯುವತಯೋ ವಾಮಾಕುಲಸ್ಯಾಧಯಃ॥

ಗುರುಜನರ ಸೇವೆಯನ್ನು ಮಾಡು. ಸವತಿಯರಲ್ಲಿ ಪ್ರಿಯ ಸಖಿಯರ ವರ್ತನೆಯನ್ನು ಅನುಸರಿಸು. ಗಂಡನು ವಿಪ್ರಕೃತಿಗೊಳಿಸಿದರೆ ಸಿಟ್ಟಿನಿಂದ ವೈಪರೀತ್ಯವನ್ನುಗೊಳ್ಳಬೇಡ. ಸೇವಕರಲ್ಲಿ ಅತಿಶಯವಾದ ಅನುಕೂಲ ವರ್ತನೆಗೊಳ್ಳು. ನಿಜ ಭಾಗ್ಯವಿಷಯದಲ್ಲಿ ನಿಗರ್ವಿಯಾಗು. ಇಂತಿದ್ದರೆ ಯುವತಿಯರು ಗೃಹಿಣೀ ಸ್ಥಾನವನ್ನು ಪಡೆವರು. ವಿರುದ್ಧವಾದರೆ ಕುಲಕ್ಕೆ

ಆಧಿ (ಮಾನಸಪೀಡೆ)ಯರಿಸಿಸುವರು. ವನವಾಸಿಯಾದ ಕಣ್ವನು ಇಲ್ಲಿ ಗೃಹಸ್ಥ ಧರ್ಮವನ್ನೇ ಸಾಕುಮಗಳಿಗೆ ಹೇಳಿದ್ದಾನೆ.

ಪತಿಗೃಹವನ್ನು ಸೇರಿ ಹಿರಿಯರ ಸೇವೆ ಮಾಡುವುದು ಹೆಮ್ಮಕ್ಕಳ ಪ್ರಧಾನ ಕರ್ಮ. ಅತ್ತೆಮಾವಂದಿರನ್ನು ಅಲಕ್ಷಿಸಿ ಕಾಲಕಳೆಯುವುದಲ್ಲ. ದೊಡ್ಡ ಕುಟುಂಬದಲ್ಲಿ ಮೈದುನಿಯರು ಇರಬಹುದು. ನಾದಿನಿಯರೂ ಇರಬಹುದು. ಅವರಲ್ಲಿ ಪ್ರೀತಿಯ ಗೆಳತಿಯಂತೆ ಇರುವುದು ಪ್ರಧಾನ. ಅಲ್ಲವಾದರೆ ಮನೆ ಹೋಳಾಗಬಹುದು. ಗಂಡ ಒಂದು ವಿಷಯದಲ್ಲಿ ನಿರಾಕರಿಸಿದರೆ ಅದಕ್ಕೆ ಸತ್ಯಾಗ್ರಹ ಹೂಡಬೇಡವೆಂದು ನಿರ್ದಾಕ್ಷಿಣ್ಯವಾಗಿ ನಾಲ್ನುಡಿಯಿಂದ ಹೇಳಿದ್ದಾನೆ. ಸೇವಕ ವರ್ಗದಲ್ಲಿ ದಕ್ಷಿಣೆಯ ವರ್ತನೆಗೊಳ್ಳು ಎಂದು ಕೆಲಸಗಾರರನ್ನು ಕಂಡೊಡನೆ ಪ್ರಭುತ್ವದ ಆಜ್ಞೆಯಲ್ಲ. ಕೆಲಸದ ಪರಿವಿಡಿಯ ಮಾರ್ಗಕ್ರಮ ಅನುಕೂಲ ವರ್ತನೆ ಬೇಕೆಂದು ಕಾರ್ಯಸಾಧನೆಗಿರುವ ಮಾರ್ಗವನ್ನು ತೋರಿದ್ದಾನೆ. ಭಾಗ್ಯ ವಿಚಾರದಲ್ಲಿ ದರ್ಪಗೊಳ್ಳಬೇಡ. ಈಕೆಯ ಸಂಪತ್ತು ತನಗಿಲ್ಲವೆಂಬ ದುಃಖ ಕೂಡದು. ಇವೆರಡಕ್ಕೂ ಯೋಜಿಸುವಂತೆಯೇ ಕಣ್ವನು ಗೃಹಿಣೀ ಧರ್ಮವನ್ನು ಸಾರಿದ್ದಾನೆ.

ಕಾಳಿದಾಸನ ಅಭಿಜ್ಞಾನ ಶಾಕುಂತಲದ ಈ ನಾಲ್ಕು ಪದ್ಯಗಳ ವಿಷಯದಲ್ಲಿ ಕೆಲವರಿಗೆ ಭಿನ್ನಾಭಿಪ್ರಾಯವಿದೆ. "ಪಾತುಂ ನ ಪ್ರಥಮಂ" ಎಂಬೀ ಪದ್ಯವನ್ನು ಬಿಟ್ಟು ಈ ಕೆಳಗಿನ ಪದ್ಯಕ್ಕೆ ಪ್ರಾಮುಖ್ಯವನ್ನು ಕೊಡುತ್ತಾರೆ.

ಅಭಿಜನವತೋ ಭರ್ತುಃ ಶ್ಲಾಘ್ಯೇ ಸ್ಥಿತಾ ಗೃಹಿಣೀ ಪದೇ
ವಿಭವಗುರುಭಿಃ ಕೃತ್ಯೈಸ್ತಸ್ಯ ಪ್ರತಿ–ಕ್ಷಣ ಮಾಕುಲಾ
ತನಯ ಮಚಿರಾತ್ ಪ್ರಾಚೀವಾರ್ಕಂ ಪ್ರಸೂಯ ಚಪಾವನಂ
ಮಮ ವಿರಹಜಾಂ ನತ್ವಂವತ್ಸೇ ಶುಚಂ ಗಣಯಿಷ್ಯಸಿ॥

(ಕುಲೀನನಾದ ಪತಿಯ ಸರ್ವೋತ್ಕೃಷ್ಟವಾದ ಗೃಹಿಣೀ ಸ್ಥಾನದಲ್ಲಿದ್ದು ಸಂಪತ್ತಿನಿಂದ ಗುರುತರವಾದ ಆತನ ಕರ್ಮಗಳಲ್ಲಿ ಪ್ರತಿ ನಿಮಿಷವೂ ಆಕುಲಿಯೆನಿಸಿ ಬೇಗನೆ ಮೂಡುದಿಕ್ಕಿನ ವನಿತೆ ಪಡೆದ. ಸೂರ್ಯೋಪಮನಾದ ಮಗನನ್ನು ಪಡೆದು ನನ್ನ ಅಗಲಿನ ಶೋಕವನ್ನು ಮನಸ್ಸಿಗೆ ತರಲಾರೆ.) ಶಕುಂತಳೆಯು ಪತಿ ಗೃಹವನ್ನು ಸೇರಿ ತಂದೆಯೇ ಕಣ್ವನು ನಿನ್ನನ್ನು ಅಗಲಿ ಹೇಗೆ ದೇಶಾಂತರದಲ್ಲಿ ಬಾಳಲಿ ಎಂದು ಕೇಳಿದಾಗ ಕಣ್ವನು ನುಡಿವ ನುಡಿ ಇದು. ಈ ಮಾತು ಲೋಕದ ಅನುಭವದ ತಿರುಳು. ಕಾಶ್ಯಪ (ಕಣ್ವ) ಈ ನಾಟಕದಲ್ಲಿ ನಾಲ್ಕನೆ ಅಂಕದಲ್ಲಿ ಮಾತ್ರ ಕಾಣಬರುವನು. ಉಳಿದೆಡೆಯಲ್ಲಿ

ಅವನಿಲ್ಲ. ಶಕುಂತಲೆಯನ್ನು ತನ್ನ ಶಿಷ್ಯರಿಂದೊಡಗೂಡಿ ಕಳುಹುವ ಹೊತ್ತಿನಲ್ಲಿ ಮಾತ್ರ ಆತನು ಕಾಣಬರುತ್ತಾನೆ. ಕಾಡೇ ಮನೆಯಾದ ತಪಸ್ವಿಯೊಬ್ಬನನ್ನು ಚಿತ್ರಿಸುವಲ್ಲಿ ಕಾಳಿದಾಸನು ಒಳ್ಳೆಯ ಕೈಚಳಕ ತೋರಿದ್ದಾನೆ. ವಾಲ್ಮೀಕಿಯ ಜೀವನ ಕಣ್ವನ ಜೀವನ ಋಷಿಗಳ ಘನತೆಯ ಜೀವನವನ್ನು ನಮಗೆ ತೋರುತ್ತಿವೆ. ಋಷಿಗಳೆಂದರೆ ಎಂತಹರೆಂಬ ಕಲ್ಪನೆ ಇವರನ್ನು ಕಂಡಾಗ ನಮ್ಮ ಮನಸ್ಸಿಗೆ ಬಾರದುಳಿಯದು. ಕಣ್ವನು ಹೆಸರಾಂತ ಹಿಂದಣ ಕುಲಪತಿ. ಈ ಕುಲಪತಿಯ ಸಾಕು ಮಗಳಪುತ್ರ ಭರತ. ಈ ಭರತನಿಂದಲೇ ನಮ್ಮ ದೇಶವು ಅವನ ನಾಮಕರಣಗೊಂಡಿದೆ. ಇಂತಹ ಆದರ್ಶಜೀವನವನ್ನು ಕಣ್ವನ ಜೀವನದಲ್ಲಿ ನಾವು ಕಾಣುತಿದ್ದೇವೆ. ಈ ಕುಲಪತಿಯ ನಾಲ್ಕು ನುಡಿ ಎಂದೂ ಅಮರ. ನಮ್ಮ ವಿಶ್ವವಿದ್ಯಾಲಯಗಳ ಆಚಾರ್ಯರ ನಲ್ನುಡಿಗಳು ಇಂತೆಯೇ. ಉತ್ತಮಗಳಾಗಿರಬೇಕು. ಅದನ್ನು ಆಶಿಸುತ್ತಿರುವುದು ಇಂದಣ ಜನತೆ. ಇಂತಹ ನಲ್ನುಡಿಗಳು ಪ್ರಧಾನ ಹಾಗೂ ಇನ್ನಿತರ ಆಚಾರ್ಯರುಗಳಿಂದ ಹೊರಬಂದು ದೇಶವು ಉನ್ನತಿಯ ಬಾಳನ್ನು ಸಾಧಿಸುವಂತಾಗಲಿ. ಇದಕ್ಕಾಗಿಯೇ ಈ ನುಡಿಗಳನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ.



# ಶಕುಂತಲೆಯ ಗೌರವವನ್ನು ತೋರುವ ಕಾಳಿದಾಸ

"ಅಭಿಜ್ಞಾನ ಶಕುಂತಳ"ದಲ್ಲಿ ಶಕುಂತಳೆಯ ಬಾಲ್ಯ ಜೀವನದಿಂದ ಮೊದಲುಗೊಂಡುಳ್ಳ ಕತೆಯು ನಮಗೆ ಒದಗುತ್ತಿದೆ. ಈ ನಾಟಕದಲ್ಲಿ ದುಷ್ಯಂತನ ಜೀವನದ ಕತೆ ಅಲ್ಪವಾಗಿ ದೊರೆಯುತ್ತಿದೆ. ದುಷ್ಯಂತ ನಾಯಕನಾದರೂ ನಾಯಕನ ಜೀವನ ಕತೆಗಿಂತ ಹೆಚ್ಚಿನ ಅಂಶ ಈ ನಾಯಿಕೆಯಾದ ಶಕುಂತಲೆಯದು. ಶಕುಂತಲೆ ಅಪ್ಸರೆಯಲ್ಲುದಿಸಿದ ಕೌಶಿಕನ ಕುವರಿ. ರಾಜರ್ಷಿಯು ಬ್ರಹ್ಮರ್ಷಿಯಾಗಲು ಹೊರಟಾಗ ತಪಸ್ಸಿನ ತಡೆಗಾಗಿ ಇಂದ್ರನಿಂದ ಕಳುಹಿದ ಮೇನಕೆಯಲ್ಲಿ ಜನ್ಮವಿತ್ತ ನಾರೀ ರತ್ನ. ಕಾಳಿದಾಸನು ಶಕುಂತಳೆಯ ಗೌರವದ ನೆಲೆಯನ್ನು ಶಾಕುಂತಲಾ ನಾಟಕದ ಐದನೇ ಅಂಕದಲ್ಲಿ ಚಿತ್ರಿಸಿರುವನು.

ಕಣ್ವ ಶಿಷ್ಯರು ಹಸ್ತಿನಾವತಿಗೆ ಬಂದರು. ಕಣ್ವನು ದುಷ್ಯಂತನಿಗೆ ತನ್ನ ಮಗಳನ್ನು ಒಪ್ಪಿಸಿಕೊಡುವ ಕೆಲಸಕ್ಕಾಗಿ ಅವರನ್ನು ಕಳುಹಿದ್ದನು. ಗೌತಮಿ, ಶಕುಂತಲೆ, ಶಾರ್ಂಗರವ, ಶಾರದ್ವತರು ಹಸ್ತಿನಾವತಿಯ ರಾಜನ ಆಸ್ಥಾನಕ್ಕೆ ಪ್ರವೇಶಿಸಿದರು. ದುಷ್ಯಂತನು ಮುನಿಶಿಷ್ಯರ ಬರವನ್ನು ನಿರೀಕ್ಷಿಸುತ್ತಿದ್ದನು. ಈ ವೇಳೆ ಆತನ ಮನಸ್ಸಿನಲ್ಲಿ ಕಣ್ವ ಶಿಷ್ಯರ ಆಗಮನವಾಗುವುದಕ್ಕೆ ಏನಿರಬಹುದೆಂದು ವಿಚಾರ ಪರಂಪರೆಗಳು ಮೂಡುತಿದ್ದವು. ದೂರದಿಂದ ಮುನಿವಟುಗಳು ಆಗಮಿಸುವುದನ್ನು ಕಂಡನು. ತಪೋಧನರ ನಡುವೆ ಶಕುಂತಳೆಯಿದ್ದಳು. ಶಕುಂತಲೆಯನ್ನು ದುಷ್ಯಂತನು ದೃಷ್ಟಿಸಿದನು.

ಕಾಸ್ವಿದವಗುಂಠನವತೀ ನಾತಿ ಪರಿಸ್ಫುಟ ಶರೀರ ಲಾವಣ್ಯಾ।
ಮಧ್ಯೇ ತಪೋಧನಾನಾಂ ಕಿಸಲಯಮಿವ ಪಾಂಡುಪತ್ರಾಣಾಂ॥

ಎಂದು ಆಕೆಯ ಕುರಿತು ಪ್ರತೀಹಾರಿಯೊಡನೆ ನುಡಿದನು. "ಒಬ್ಬಳು ಅವಗುಂಠನ (ಮುಸುಕು) ಹಾಕಿದವಳಿದ್ದಾಳೆ. ಇದರಿಂದ ಆಕೆಯ ಶರೀರ ಲಾವಣ್ಯವು ವ್ಯಕ್ತವಾಗಿ ತೋರುವುದಿಲ್ಲ. ಈ ತಪೋಧನರ ನಡುವೆ ಹಣ್ಣೆಲೆಗಳ ನಡುವಿನ ಎಳೆ ಚಿಗುರಂತಿದ್ದಾಳೆ." ಎಂದು ಶಕುಂತಲೆಯ ಸೌಂದರ್ಯವನ್ನು ವರ್ಣಿಸಿದನು. ತಪೋಧನರಾದ ಜಟಾಧಾರಿಗಳ ನಡುವೆ ತೋರುತ್ತಿದ್ದ ಶಕುಂತಲೆ ಹಣ್ಣೆಲೆಗಳ ನಡುವಿರುವ ಚಿಗುರಂತಿದ್ದಳು. ಮುನಿವಟುಗಳು ತಮ್ಮ ಆಗಮನದ ಕಾರಣವನ್ನು ರಾಜನಿಗೆ ಅರುಹಲಾರಂಭಿಸಿದರು. ಸಹಧರ್ಮಾಚರಣೆಗೆ ಶಕುಂತಳೆಯನ್ನು ಸ್ವೀಕರಿಸಲಾಗಲಿ ಎಂದು ನಿವೇದಿಸಿ

ಕೊಂಡರು. ಗೌತಮಿಯೂ ದುಷ್ಯಂತ ಶಕುಂತಲೆಯರ ಪ್ರಣಯ ಸಂಪರ್ಕದ ಕುರಿತು ನುಡಿದಳು.

ಆಗ ಶಕುಂತಲೆ (ಮನಸ್ಸಿನಲ್ಲಿ) ಕಿಂನುಖಲ್ವಾರ್ಯ ಪುತ್ರೋಭಣತಿ, (ಆರ್ಯಪುತ್ರ ಏನನ್ನುವನೋ) ದುಷ್ಯಂತ--"ಕಿಮಿದಮುಪನ್ಯಸ್ತಂ" (ಏನನ್ನು ಭಾಷಿಸಿದಿರಿ) ಶಕುಂತಲೆ (ಆತ್ಮಗತ) ಪಾವಕ ಖಲು ವಚನೋಪನ್ಯಾಸಃ (ಬೆಂಕಿಯ ನುಡಿಯೊಕ್ಕಣೆಯಲ್ಲವೆ)

ಶಾಂರ್ಗರವನು ಅದಾಗ "ಇದು ತಮ್ಮ ನುಡಿಯೇ? ತಾವೇ ಅಧಿಕ ಲೋಕ ವ್ಯವಹಾರದಲ್ಲಿ ನುರಿತವರು.

ಸತೀಮಪಿ ಜ್ಞಾತಿಕುಲೈಕ ಸಂಶ್ರಯಾಂ ಜನೋಽನ್ಯಥಾ ಭರ್ತೃಮತೀಂ ವಿಶಂಕತೇ।
ಅತಃಸಮೀಪೇ ಪರಿಣೇತುರಿಷ್ಯತೇ ಪ್ರಿಯಾಪ್ರಿಯಾವಾ ಪ್ರಮದಾಸ್ವಬಂಧುಭಿಃ।

(ಬಂಧುಗಳ ಮನೆಯಲ್ಲಿ ವಾಸಿಸುವ ಸಾಧ್ವಿಯನ್ನೂ ಲೋಕದ ಜನರು ಬೇರಾಗಿಯೇ ಸಂದೇಹಗೊಳ್ಳುವರು. ಸ್ತ್ರೀ ಬಂಧುಗಳು ಈ ಕಾರಣದಿಂದ ಗಂಡನ ಬಳಿಯಲ್ಲೇ ಹೆಂಗಸನ್ನು ಇರುವಂತಿಚ್ಛಿಸುತ್ತಾರೆ.") ಎಂದು ಉತ್ತರಿಸಿದ.

ದುಷ್ಯಂತ "ಕಿಂಚಾತ್ರಭವತೀಮಯಾ ಪರಿಣೀತ ಪೂರ್ವಾ (ಈಕೆ ನನ್ನಿಂದ ಪೂರ್ವ ಪರಿಣೀತಳೇ?) ಶಕುಂತಳೆ-(ವಿಷಾದದಿಂದ ಮನದಲ್ಲಿ) ಹಿಅಅಿ, ಸಂಪದಂ ದೇ ಆಶಂಕಾ (ಹೃದಯವೇ ನಿನಗೆ ಈ ಆಶಂಕೆ)

ಶಾಂರ್ಗರವ="ಕಿಂಕೃತಕಾರ್ಯದ್ವೇಷೋ ಧರ್ಮಂಪ್ರತಿವಿಮುಖತಾ ಕೃತಾವಜ್ಞಾ" (ಏನುಗೆಯ್ದಿಯೋ ಕರ್ಮವಿರೋಧ, ಧರ್ಮದ ಕುರಿತು ಹಿಮ್ಮೊಗವಿಕ್ಕಿ ಏಂಗೆಯ್ದಿಯೋ ಅಪಮಾನ.)

ದುಷ್ಯಂತ=ಕುತೋಮಯಸತ್ಕಲ್ಪನಾ ಪ್ರಶ್ನಃ (ಎಲ್ಲಿಂದೆದ್ದಿತೀ ಆರೋಪಣೆಯ ಕಲ್ಪನಾ ಪ್ರಶ್ನೆ)

ಶಾಂರ್ಗರವ='ಮೂರ್ಛಂತ್ಯ ಮೀವಿಕಾರಾಃ ಪ್ರಯಾಣ್ಯೈಶ್ವರ್ಯಮತ್ತೇಷು ॥ (ಧನಗರ್ವಿತರಲ್ಲಿ ಈ ವಿಕಾರಗಳು ಬಾಹುಲ್ಯದಿಂದ ವರ್ಧಿಸುತ್ತಿವೆ.) ಧನಗರ್ವಿತರಲ್ಲಿ ಈ ಬಗೆಯ ಆಚಾರ ತುಂಬಿ ಬಳೆಯುತ್ತಲಿದೆ ಎಂಬೀ ಶಾಂರ್ಗರವನ ನುಡಿಯು ಲೋಕದ ಸತ್ಯವನ್ನು ತೋರಿತು. ಅದಾಗಲೇ ದುಷ್ಯಂತನು ನಿಮ್ಮಿಂದ ಬಹಳವಾಗಿ ಅಧಿಕ್ಷೇಪಗೊಂಡೆನೆಂದು ಹೇಳಿಯೇ ಹೇಳಿದನು. ಈ ವೇಳೆ ಗೌತಮಿ, "ಎಲೆ ಮಗಳೇ, ಅಲ್ಪಕಾಲ ನಾಚುಗೆಗೊಳ್ಳಬೇಡ. ನಿನ್ನ ಮುಸುಕನ್ನು ತೆಗೆವೆನು. ಆ ಮುಂದೆ ನಿನ್ನ ಗಂಡನು ನೀನಾರೆಂದು ತಿಳಿವನು.

ಎಂದು ಹೇಳುತ್ತಾ ಮೊಗದ ಮುಸುಕನ್ನು ತೆಗೆದಳು. ಶಕುಂತಲೆಯ ರೂಪವನ್ನು ಬಣ್ಣಿಸುವ ದುಷ್ಯಂತನು ಹೀಗೆನ್ನ ತೊಡಗಿದನು.

'ಇದಮುಪನತಮೇವಂ ರೂಪಮಕ್ಲಿಷ್ಟಕಾಂತಿ।
ಪ್ರಥಮ ಪರಿಗೃಹೀತಂ ಸ್ಯಾನ್ನವೇತಿ ವ್ಯವಸ್ಯನ್
ಭ್ರಮರ ಇವ್ಯವಿಭಾತೇ ಕುಂದಮಂ ತಸ್ತುಷಾರಂ।
ನಚಖಲು ಪರಿಭೋಕ್ತುಂ ನೈವಶಕ್ನೋಮಿಹಾತುಂ॥

(ಪ್ರಥಮ ತಾರುಣ್ಯದ ಬೆಡಗಿನ ಈ ಚೆಲುರೂಪವನ್ನು ಕಂಡು ಈಕೆ ನನ್ನಿಂದ ವಿವಾಹಿತಳೇ ಅಥವಾ ಅವಿವಾಹಿತಳೇ ಎಂಬೀ ಶಂಕೆಗೊಂಡ ನಾನು ಬೆಳಜಾವದ ಹಿಮಹನಿಗೂಡಿ ಮಧುಮಿಶ್ರಿತವಾಗಿರುವ ಗುಡ್ಡ ಮಲ್ಲಿಗೆಯ ಹೂವನ್ನು ಕಂಡ ತುಂಬಿಯಂತೆ ಉಪಭೋಗಿಸಲೂ ಉಪಭೋಗಿಸದಿರಲೂ ಅಶಕ್ತನಾಗಿರುತ್ತೇನೆ.) ಎಂದೆಣಿಕೆಗೊಳಗಾದನು. ದುಷ್ಯಂತನು ನಿಜವಾಗಿಯೂ ತುಂಬಿಯಂತಹ ವ್ಯಕ್ತಿ ಅಹುದು. ದುಷ್ಯಂತನು ತಾನು ಈಕೆಯನ್ನು ಸ್ವೀಕರಿಸಿದ್ದೇ ನೆನಪಿಲ್ಲವೆಂದು ಉತ್ತರಿಸಿದನು.

ಈ ಹೊತ್ತಿನಲ್ಲಿ ಶಕುಂತಲೆ ಆರ್ಯನಿಗೆ ವಿವಾಹ ವಿಷಯದಲ್ಲೇ ಸಂದೇಹವಿರಲು ಮುಂದಿನ ಹಂಬಲುಗಳನ್ನು ಹತ್ತಿ ಮಾಡಲೇನೆಂದು ಮನದಲ್ಲೇ ಕೊರಗಿದಳು. ಶಾಂರ್ಗರವನು ಮಾತನ್ನು ಮುಂದುವರಿಸಿದನು. "ಅಪರಾಧಿಯಾದ ನಿನ್ನನ್ನು ಮುನಿಯು ಗೌರವಿಸಿ, ಮಗಳನ್ನು ಕಳುಹಿಸಿ ಕೊಟ್ಟುದಕ್ಕೆ ಈ ಅವಮಾನ ತಕ್ಕುದಲ್ಲ. ಕಳ್ಳನನ್ನು ಹಿಡಿದು ಆ ಬಳಿಕ ಆತನು ಕದ್ದ ಸಂಪತ್ತನ್ನು ಅವನ ಕೈಗೆ ಕೊಟ್ಟು ಗೌರವಿಸಿದಂತೆ ಮುನಿಯ ಕೆಲಸವಾಯಿತೆಂ"ದು ಆಕ್ಷೇಪಿಸಿದನು. ಮುಂದೆ ಶಕುಂತಳೆಗೆ ಮಾತೆತ್ತದೆ ನಿರ್ವಾಹವಿಲ್ಲ. ಈ ತನಕ ಶಕುಂತಳೆ ಸುಮ್ಮನಿದ್ದಳು. ಶಾರದ್ವತನು, "ಎಲೆ ಶಕುಂತಳೆ ನಾವು ಹೇಳ ತಕ್ಕುದನ್ನು ಹೇಳಿದೆವು. ದುಷ್ಯಂತನೂ ಹೀಗೊರೆವನು. ಇವನಿಗೆ ನಂಬುಗೆಯ ಮಾತನ್ನು ನೀನೇ ಕೊಡು" ಎಂದು ಮಾತಿಗೆ ಅವಕಾಶವಿತ್ತನು. ಶಕುಂತಳೆ ಸ್ತ್ರೀ ಕುಲದ ಮಾನವನ್ನು ಕಾದು ಇದುತನಕ ಉಳಿದಳು. ಮುಂದೆಯೂ ಅಂತೆಯೇ ಉಳಿದಳು. ಕಾಳಿದಾಸನು ನಾರೀ ಕುಲದ ಗೌರವವನ್ನು ಶಕುಂತಲೆಯ ಮೂಲಕ ರಕ್ಷಿಸಹೊರಡುತ್ತಾನೆ. ಶಕುಂತಲೆ ಗೌರವಕ್ಕೆ ಯೋಗ್ಯವಾದ ನುಡಿಯನ್ನೇ ಹೇಳತೊಡಗುವಳು.

ಶಕುಂತಲೆ=ಇಮಂ ಅವತ್ಥಂತರಂಗದೇ ತಾರಿಸೇ ಅಣುರಾಯೇ ಕಿಂ ವಾ ಸುಮರಾವಿದೇಣ. ಅತ್ತಾದಾಣಿಂ ಮೇ ಸೋಅಣೀಒತ್ತಿ ವವಸಿದಂ ಏದಂ।

(ಪ್ರಕಾಶಂ) ಅಜ್ಜ ಉತ್ತ, (ಇತ್ಯರ್ಧೋಕ್ತೇ) ಸಂಸಇದೇ ದಾಣಿಂ ಣ ಏಸೋ ಸಮುದಾಹಾರೋ. ಪೋರವ, ಣ ಜುತ್ತಂ ಣಾಮ ದೇ ತಹ ಪುರಾ ಅಸ್ಸಮ ಪದೇ ಸಹಾವೊತ್ತಾಣ ಹಿಅಅಂ ಇಮಂ ಜಣಂ ಸಮಅಪುವ್ವಂ ಪತಾರಿಅ ಈ ದಿಸೇಹಿಂ ಅಕ್ಖರೇಹಿಂ ಪಚ್ಚಾಚಕ್ಖಿದುಂ. (ಸಂಸ್ಕೃತ) [ಇದಮವಸ್ಥಾಂತರಂ ಗತೇ ತಾದೃಶೇನುರಾಗೇ ಕಿಂವಾ ಸ್ಮಾರಿತೇನ. ಆತ್ಮೇದಾನೀಂ ಮೇ ಶೋಚ ನೀಯ ಇತಿ ವ್ಯವಸಿತಮೇತತ್. ಆರ್ಯಪುತ್ರ (ಇತ್ಯರ್ಧೋಕ್ತೇ) ಸಂಶ ಯಿತ ಇದಾನೀಂ ನೈಷ ಸಮುದಾಚಾರಃ। ಪೌರವ, ನ ಯುಕ್ತಂ ನಾಮ ತೇ ತಥಾ ಪುರಾಶ್ರಮಪದೇ ಸ್ವಭಾವೋತ್ತಾನಹೃದಯಮಿಮಂ ಜನಂ ಸಮಯ ಪೂರ್ವಂ ಪ್ರತಾರ್ಯೇದೃಶೈರಕ್ಷರೈ ಪ್ರತ್ಯಾಖ್ಯಾತುಂ.] (ಮನದಲ್ಲಿ) ಈ ಅವಸ್ಥಾಂತರವನ್ನು ಹೊಂದಲು ಆ ರೀತಿಯ (ಉಂಗುರ ತೊಡಿಸುವಿಕೆ ಗಾಂ ಧರ್ವ ವಿವಾಹದ ಮಾತುಕತೆ, ನಾಮಾಕ್ಷರ ಗಣನೆಯ ದಿನಾಂತರದ ಆಗಮ ನದ ಮಾತುಕತೆ ಮೊದಲಾದುವುಗಳ) ಅನುರಾಗ ಕತೆಯನ್ನು ಸ್ಮರಣೆಗೊಳಿಸಿ ಯೇನು ಫಲ? ತಾನೋರ್ವಳೇ ಈಗ ತನ್ನ ವಿಚಾರ ಚಿಂತೆಗೊಳಗಾದೆನಲ್ಲಾ. (ಪ್ರಕಾಶ) ಆರ್ಯಪುತ್ರ! (ಅರ್ಧವಾಗಿ ನುಡಿದಲ್ಲೇತಡೆದು) ಸಂಶಯಗೊಂ ಡಿರಲು ಈಗ ಈ ಸಂಬೋಧನೆ ಸಮುದಾಚಾರವೆನಿಸದು. ಪೌರವನೇ (ಪುರು ವಂಶೀಯನೇ ಹಿಂದೆ ಆಶ್ರಮಸ್ಥಾನದಲ್ಲಿ ಮುಗ್ಧೆಯಾದ ಈ ನನ್ನನ್ನು ಸಮ ಯಾನುಸಾರ ನಂಬುಗೊಳಿಸಿ ಈ ರೀತಿಯಿಂದ ಇಂದು ನುಡಿಯುವುದು ನಿನಗೆ ಯುಕ್ತವಲ್ಲ.

ಶಕುಂತಲೆಯ ಈ ಮಾತು ಸ್ತ್ರೀ ಹೃದಯದ ಯಥಾರ್ಥವಾದ, ಒಡೆದು ತೋರುವ ಸ್ಪಷ್ಟ ಚಿತ್ರ. ಹೆಂಗಸರ ಸ್ವಭಾವ ಚಿತ್ರವನ್ನು ಕೊಡುವುದರೊಂದಿಗೆ ಶಕುಂತಳೆಯ ಗೌರವವನ್ನು ಕಾಳಿದಾಸನು ಹೆಚ್ಚಿಸಿ ದ್ದಾನೆ. ‘ಗಾಂಧರ್ವ ರೀತಿಯಿಂದ ಹಲವು ರಾಜರ್ಷಿ ಕನ್ನೆಯರು ವಿವಾಹ ಗೊಂಡಿರುವರು. ಪಿತೃ ಜನರಿಂದಲೂ ಅಭಿನಂದಿಸಲ್ಪಟ್ಟಿರುವರು’ ಎಂದು ದುಷ್ಯಂತನು ಶಕುಂತಲೆಯನ್ನು ಹಿಂದೆ ಒತ್ತಾಯಿಸಿದ್ದನು. ಆ ಅನುರಾಗ ವಿಚಾರ ಪ್ರಣಯ ಸಂಪರ್ಕಕಥೆಯನ್ನು ಇಲ್ಲಿ ಹೇಳಿ ನೆನವರಿಸಿ ಫಲವೇನು? ಅದಲ್ಲದೆ ದಿನೇ ದಿನೇ ನನ್ನ ನಾಮಾಕ್ಷರಗಳನ್ನು ಗಣಿಸು. ನಾಮಾಕ್ಷರ ಕೊನೆಗೊಳ್ಳುವ ಸಪ್ತಾಹದ ಮೊದಲು ಅಂತಃಪುರಕ್ಕೆ ಕರೆದೊಯ್ಯುವೆನು’ ಎಂದೊರೆದ ಆ ನುಡಿಗಳನ್ನೆತ್ತಿ ಉಂಟಾಗುವ ಲಾಭವಾವುದು? ವಿವಾಹ ವಿಚಾರದಲ್ಲಿ ನಾನೊಬ್ಬಳೇ ಸಾಕ್ಷಿಯಾಗಿರಬೇಕಾಯಿತು. ಆರ್ಯ ಪುತ್ರ

ನೆನ್ನಲೇ? ವಿವಾಹದಲ್ಲೇ ಸಂದೇಹ ಬಂದ ಬಳಿಕ ಈ ಸಂಬೋಧನೆ ಅನುಚಿತ. ಎಂದು ಪುರುವಂಶೀಯನೇ! ನಿನ್ನ ಕುಲಕ್ಕೆ ಹೇಳಿದ ಮಾತಲ್ಲ. ಯಯಾತಿ ಶರ್ಮಿಷ್ಠೆಯರ ಚರಿತೆಯನ್ನು ಈ ಸಂಬೋಧನೆಯಿಂದ ನಾವು ನೆನೆಯಬೇಕಿದೆ. ಪುರುವು ಯಯಾತಿ ಶರ್ಮಿಷ್ಠೆಯರ ಪುತ್ರನು. ಅದೇ ಪುರು ಕುಲದವನೇ ಎಂದು ಹಿಂದಣ ಒಂದು ಪ್ರಣಯ ಕತೆಯನ್ನು ಗಂಭೀರವಾಣಿಯಿಂದ ಎಚ್ಚರಿಸಿ, ಬಾಲಿಕೆಯಾದ ನನ್ನನ್ನು ಸಮಯಾನುಸಾರ ಮೋಹಜನಕ ನುಡಿಗಳಿಂದ ನಂಬುಗೆಗೊಳಿಸಿ ಈಗ ಈ ರೀತಿಯಿಂದ ನೀನು ಹೇಳುವ ಮಾತು ಉಚಿತವಾಗಿಲ್ಲ'ವೆಂದು ಮಾರ್ಮಿಕವಾಗಿಯೂ ಗಂಭೀರವಾಗಿಯೂ ನುಡಿಯುವಳು. ರಾಜರ್ಷಿ ಕುಲದವರಾಗಿದ್ದು ಕಾಲಕ್ಕೆ ತಕ್ಕಂತೆ ನುಡಿವ ಸ್ವಭಾವ ಬರಕೂಡದು. ಅದು ಬಂದಿತು. ಪುರವಂಶೀಯ ಚರಿತ್ರೆಯು ಇಂತಹುದೆಂದಾಗಿಸಬೇಡ. ಪುರವಂಶಕ್ಕೆ ಮಸಿ ಬಳಿಸಿಕೊಳ್ಳುವ ಆಚರಣೆ ಇದು' ಎಂದು ಆರಂಭದಲ್ಲಿಯೇ ಎಚ್ಚರಗೊಟ್ಟು ಕಣ್ವನ ಆಶ್ರಮದಲ್ಲಿ ಕುಲಪತಿಯಲ್ಲಿ ಶಿಕ್ಷಣಗೊಂಡ ಗೌರವ ಪೂರ್ವಕವಾದ ನುಡಿಯನ್ನೇ ಶಕುಂತಲೆಯಿಂದ ಕಾಳಿದಾಸನು ನುಡಿಸಿರುವನು.

ದುಷ್ಯಂತನು ಶಕುಂತಲೆಯ ಮಾತನ್ನು ಕೇಳುತ್ತಲೇ ಕಿವಿಯನ್ನು ಮುಚ್ಚಿ "ಮಹಾ ಪಾಪ! ಮಹಾಪಾಪ"ವೆಂದೊರೆದು

ವ್ಯಪದೇಶ ಮಾವಿಲಯಿತುಂ ಕಿಮೀಹಸೇಜನಮಿಮಂಚಪಾತಯಿತುಂ॥
ಕೂಲಂಕಷೇವ ಸಿಂಧುಃ ಪ್ರಸನ್ನಮಂಭಸ್ತಟತರುಂಚ॥

(ದಡವನ್ನು ಕೊರೆದು, ಶುದ್ಧವಾದ ನೀರನ್ನು ಕಲಕಿಸಿ, ದಡದ ಮರವನ್ನುರುಳಿಸಿ ಹರಿವ ನದಿಯಂತೆ ನನ್ನನ್ನೂ ನನ್ನ ವಂಶವನ್ನೂ ಕೆಳಕ್ಕೆ ಪತನಗೊಳಿಸಲೆಳಿಸುವೆಯಾ) ಎಂದು ಉತ್ತರವನ್ನಿತ್ತನು. ಶಕುಂತಲೆ ಮಳೆಗಾಲದ ಹೊನಲ ವೇಗದ ನದಿಯೆನಿಸಿದಳು. ಅದಕ್ಕಾಕೆ—ಭವತು ಯದಿಪರಮಾರ್ಥತಃ ಪರಪರಿಗ್ರಹಶಂಕಿನಾತ್ವಯೈವಂ ವಕ್ತುಂ ಪ್ರವೃತ್ತಂ ತದಭಿಜ್ಞಾನೇನಾನೇನ ತವಾ ಶಂಕಾಪನೇಷ್ಯಾಮಿ. (ಆಗಲಿ ಬೇರೆಯವರ ಹೆಣ್ಣೆಂದು ಶಂಕಿಸಿ, ಯಥಾರ್ಥದಿಂದ ನೀನೊರೆವೆಯಾದರೆ ಇದೋ ಈ ಅಭಿಜ್ಞಾನದಿಂದ ನಿನ್ನ ಶಂಕೆಯನ್ನು ಹೋಗೊಳಿಸುವೆನು.) ಎಂಬ ಈ ಶಕುಂತಲೆಯ ನುಡಿ ಸಮಾಧಾನ ಪೂರ್ಣವಾಗಿದ್ದು ಯೋಗ್ಯವೂ ಎನಿಸಿತು.

ದುಷ್ಯಂತನು ಉದಾರಃ ಕಲ್ಪಃ (ಉದಾರ ನ್ಯಾಯ)ವೆಂದು ಉತ್ತರಿಸಿದನು. ಕೂಡಲೇ ತನ್ನ ಬೆರಳುಗಳ ಕಡೆಗೆ ಕೈ ನೀಡಲು ಶಕುಂತಲೆ

ಉಂಗುರವನ್ನು ಕಾಣದಾದಳು. ಹಾಧಿಕ್ ಅಂಗುಲೀಯಕಶೂನ್ಯಾ ಮೇ ಅಂಗುಲಿಃ (ಉಂಗುರವಿರದ ಬೆರಳು ನನ್ನದು) ಎಂದು ಕೊರಗತೊಡಗಿದಳು.

ಶಕುಂತಲೆಯೊಂದಿಗೆ ಗೌತಮಿ ಬಂದಿದ್ದಳು. ಆಗ ಆಕೆ ಶಕ್ರಾವ ತಾರದ ಪರಿಸರ ಶಚೀತೀರ್ಥವನ್ನು ವಂದಿಸುತಿದ್ದ ನಿನ್ನಿಂದ ಉಂಗುರವನ್ನು ಕಳಕೊಳ್ಳಲಾಯಿತೆಂದು ಶಕುಂತಲೆಯನ್ನು ಸಮಾಧಾನಿಸಿದಳು.

ಆಗ ರಾಜನಾದ ದುಷ್ಯಂತನು ಇದು ಹೆಂಗಸರ ಬುದ್ಧಿ ಚಾಪಲ್ಯವೆಂದು ನಸುನಕ್ಕು ಉತ್ತರಿಸಿಯೇ ಬಿಟ್ಟನು. ದುಷ್ಯಂತನು ಸ್ತ್ರೀ ಸಮುದಾಯದ ಮೇಲೆ ಅಪರಾಧದ ಹೊರೆಯನ್ನು ಇರಿಸಿದನು. "ಇದಂತತ್ಪ್ರತ್ಯುನ್ನಮ ತಿಸ್ತ್ರೈಣಮಿತಿಯದುಚ್ಯತೇ" ಎಂಬೀ ಮಾತು ಒಂದಿಗಿದ್ದ ಗೌತಮಿಗೂ ತಟ್ಟಿತು. ದುಷ್ಯಂತನ ನಗುಮುಖದ ಈ ನುಡಿ ಒಂದು ಸಮುದಾಯದ ಮೇಲೆ ಹೊರಿಸಿದ ಅಪರಾಧವಾಗಿದ್ದರೂ ಶಕುಂತಲೆ ಅದನ್ನು ಅಲ್ಲಿಗೇ ನುಂಗಿ ಕೊಂಡಳು; ಮರುನುಡಿಗೆ ತೊಡಗಿದಳು. "ಅತ್ರತಾವದ್ವಿಧಿನಾ ದರ್ಶಿತಂ ಪ್ರಭುತ್ವಂ ಅಪರಂತೇ ಕಥಯಿಷ್ಯಾಮಿ." (ಇಲ್ಲಿ ವಿಧಿಯಿಂದ ಪ್ರಭುತ್ವವನ್ನು ತೋರಿಸಲಾಯಿತು. ಬೇರೆ ನಿನಗೆ ಹೇಳುವೆನು.) ಎಂದು ರಾಜಾಜ್ಞೆಯನ್ನು ಕೇಳಿಕೊಂಡಳು.

ದುಷ್ಯಂತ='ಶ್ರೋತವ್ಯ ಮಿದಾನೀಂ ಸಂವೃತ್ತಂ' (ಈಗ ಕೇಳ ತಕ್ಕು ದಾಯಿತೆಂಬ ರಾಜವಚನವಾಯಿತು.) ಶಕುಂತಲೆ ನುಡಿಗೆ ಆರಂಭಿಸಿದಳು. "ನನ್ವೇಕಸ್ಮಿನ್ ದಿವಸೇ ನವಮಾಲಿಕಾ ಮಂಡಪೇ ನಲಿನೀ ಪತ್ರ ಭಾಜನಗತ-ಮುದಕಂ ತವ ಹಸ್ತೇ ಸಂನಿಹಿತ ಮಾಸೀತ್" (ಒಂದು ದಿನ ನವಮಾಲಿಕಾ ಮಂಡಪದಲ್ಲಿ ತಾವರೆಎಲೆಯದೊಣ್ಣೆಯಲ್ಲಿ ನೀರು ತುಂಬಿದವನಾಗಿ ನೀನಿರು ತಿದ್ದೆ. ಎಂದೀರೀತಿಯ ಪೂರ್ವ ಚರಿತ್ರೆಗೆ ಕೈ ನೀಡತೊಡಗಿದಳು. ಶಕುಂತಲೆ ಕತೆಯಂತೆಯೇ ನುಡಿಗಟ್ಟಲು ದುಷ್ಯಂತನಿಗೆ ಕೇಳುವ ಹಂಬಲು ಹುಟ್ಟಿತು. 'ಶೃಣುಮಸ್ತಾವತ್'' (ಕತೆಯನ್ನು ಕೇಳುವೆವು) ಎಂಬೀ ಆಶ್ವಾಸನೆ ದೊರೆತ ಬಳಿಕ ಶಕುಂತಲೆ ರಾಜ ಚರಿತ್ರೆಯನ್ನು ಹೇಳತೊಡಗಿದಳು. ಆಕೆಯ ಮಾತುಗಳು ಈ ಕೆಳಗಿನವುಗಳಾಗಿದ್ದುವು. ತಕ್ಷಣೇ ಸಮೇಪುತ್ರಕೃತಕೋ ದೀರ್ಘಾಪಾಂಗೋನಾಮ ಮೃಗಪೋತಕ ಉಪಸ್ಥಿತಃ ತ್ವಯಾಯಂ ತಾವ ತ್ಪ್ರಥಮಂ ಪಿಬತ್ವಿತ್ಯನುಕಂಪಿನೋಪಚ್ಛಂದಿತಂ ಉದಕೇನ. ನಪುನಸ್ತೇ ಪರಿ ಚಯಾದ್ಧಸ್ತಾಭ್ಯಾಶಮುಪಾಗತಃ. ಪಶ್ಚಾತ್ತಸ್ಮಿನ್ನೇವಮಯಾ ಗೃಹೀತೇ ಸಲಿ ಲೇನೇನ ಕೃತಃ ಪ್ರಣಯಃ। ತದಾತ್ವಮಿತ್ಥಂ ಪ್ರಹಸಿತೋಽಸಿ. ಸರ್ವಃ ಸಗಂ

ಧೇಷು ವಿಶ್ವಸಿತಿ. ದ್ವಾವಪ್ಯರಣ್ಯಕಾವಿತಿ.” (ಅದೇ ನಿಮಿಷ ನನ್ನ ಸಾಕು ಮಗು ದೀರ್ಘಾಪಾಂಗನೆಂಬ ಹರಿಣ ಶಿಶು ಬಂದಿತು. ನೀನು ದಯೆಗೊಂಡು ನೀರು ಕುಡಿಯಲೆಂದು ನೀರನ್ನು ಅದರ ಬಳಿ ನೀಡಿದೆ. ನಿನ್ನ ಪರಿಚಯ ವಿರದ ಅದು ನಿನ್ನ ಕೈ ಬಳಿಗೆ ಬರಲಿಲ್ಲ. ಆ ಬಳಿಕ ನಾನು ಅದನ್ನೆತ್ತಿ ಹಿಡಿಯಲು ನೀರಿನ ಆಸೆಗೊಂಡಿತು. ಆಗ ನೀನು ಈ ರೀತಿಯಿಂದ ಪರಿಹಾಸಗೊಂಡೆ. ಎಲ್ಲರೂ ಸಮಾನ ವಾಸನೆಯವರಲ್ಲಿ ನಂಬುಗೆಗೊಳ್ಳುವರು. (ಇಬ್ಬರೂ ಕಾಡಿನವರೆಂದು) ಎಂಬ ಈ ಶಕುಂತಲೆಯ ಮಾತುಗಳು ಎಷ್ಟು ಸಹಜಪೂರ್ಣವಾಗಿವೆ! ಶಕುಂತಳೆಯು ಹೇಳತಕ್ಕ ಮಾತುಗಳು ಇವುಗಳೇ. ಹೆಂಗಸರಿಗೆ ಸಾಮಾನ್ಯವಾಗಿ ಅವರ ಹೃದಯದಲ್ಲಿ ಬರುವ ವಿಚಾರಗಳು ಇಂತಹವು. ವಿಧವೆ ಹೆಂಗಸು ಯಾವುದಾದರೂ ಪೂರ್ವ ಚರಿತ್ರೆಯನ್ನು ಹೇಳತೊಡಗಿದರೆ ಆಕೆ ತನ್ನ ಪತಿಯೊಡನೆ ಸುಖಪೂರ್ಣವಾಗಿ ಆನಂದವನ್ನು ಅನುಭವಿಸಿದ ಸುಖದ ಚಿತ್ರವನ್ನು ಹೇಳುವಳು. ‘ನಾನು ನನ್ನ ಗಂಡನೊಡಗೂಡಿ ಇಂತಹ ಕಡೆಗೆ ಹೋದೆ. ಅಲ್ಲಿ ಇಂತಹುದನ್ನು ಅನುಭವಿಸಿದೆ.’ ಎಂದಿತ್ಯಾದಿಯಾಗಿ ಸುಖದ ಮಾತುಕತೆಗೆಯ್ಯುವರು. ಹೆಂಗುಸರ ಕಣ್ಣು ಸುಖದ ಕಡೆಗೆ. ಗಂಡುಸರ ನೋಟ ದುಃಖದ ಕಡೆಗೆ. ಗಂಡುಸು ಬನ್ನಬವಣೆಗಳ ವೇದನೆಯ ದಿನಗಳನ್ನು ನೆನವರಸಿಕೊಳ್ಳುವನು.

ಶಕುಂತಲೆ ತಾನು ಅನುಭವಿದ ಸುಖದ ಮಾತನ್ನು ಎತ್ತುವಾಗಲೂ ಜಾಗರೂಕತೆಗೊಂಡಿರುವಳು. ದುಷ್ಯಂತನು ತಪೋವನವನ್ನು ಸೇರಿ ಕೆಲದಿನ ಉಳಿದಾಗ ಅವನ ಗೋಷ್ಠಿಗಳು ಎಂತಹವಾಗಿದ್ದುವು ಎಂಬುದನ್ನು ಆಕೆ ಚಿತ್ರಿಸುತಿದ್ದಾಳೆ. ಆಶ್ರಮದ ಹರಿಣ ಶಿಶುಗಳಿಗೆ ನೀರನ್ನು ನೀಡುವ ಕೆಲಸಕ್ಕೆ ಶಕುಂತಲೆಯೊಂದಿಗೆ ಸಹಾಯಿಯಾಗಿದ್ದಾನೆಂದು ಆಕೆ ಸ್ಪಷ್ಟವಾಗಿ ಹೇಳುವುದಿಲ್ಲ. ದುಷ್ಯಂತನು ಈ ಕೆಲಸಕ್ಕೆ ಹೊರಟಿರುವನೆಂದು ಕಾಳಿದಾಸನು ಮೊದಲನೇ ಅಂಕದಲ್ಲೂ ತಿಳಿಸಿರುತ್ತಾನೆ. ನೀರೆರೆದ ಸಾಲವನ್ನು ತೀರಿಸಿ ಹೋಗೆಂದು ಪ್ರಿಯಂವದೆ ಹೇಳಿದಾಗ ಆಕೆಯ ಸಾಲವನ್ನು ತೀರಿಸಲು ದುಷ್ಯಂತನು ಹೊರಟಿರುವನು. ಶಕುಂತಲೆಯನ್ನೊಲಿಸಿಕೊಳ್ಳುವ ಕೆಲಸದಲ್ಲಿ ಕಾಮಾಂಧನಾದ ಆತನು ಆವ ಆವ ಕರ್ತವ್ಯಗೊಂಡಿರುವನೋ! ಹಸ್ತಿನಾವತಿಯ ರಾಜನಿದ್ದು ಶಕುಂತಲೆಗೆ ಸೋತು ನಗರಗಮನ ವಿಷಯದಲ್ಲಿ ನುಂದೋತ್ಸಾಹಗೊಂಡಿದ್ದಾನೆ. ತನ್ನ ಗೆಳೆಯನೊಡನೆ ಈ ವಿಚಾರವನ್ನು ಬಾಯ್ಬಿಟ್ಟು ಹೇಳಿರುವನು. ತಾಯಿ ವ್ರತಪಾರಣೆಗೆ ಬರಲೆಂದು ಕರೆ

ಗೊಟ್ಟರೂ ಆ ಕರೆಗೆ ಅಲಕ್ಷ್ಯಭಾವಗೊಂಡಿದ್ದಾನೆ. ಶಕುಂತಲೆಯಲ್ಲೋರಿದ ಮನವನ್ನು ತಿರುಗಿಸಲು ಅಶಕ್ತನಾಗಿದ್ದನು.

ಕ್ವವಯಂ ಸ ಪರೋಕ್ಷ ಮನ್ಮಥೋ ಮೃಗಶಾವೈ ಸಮಮೇಧಿತೋಜನಃ।

(ನಾನೆಲ್ಲಿ? ಆ ದೂರಗೊಂಡ ಮನೋಭವನೆಲ್ಲಿ? ಹರಿಣ ಶಿಶುಗಳೊಂದಿಗೆ ಬಳೆದ ಶಕುಂತಳೆಯು ಎಲ್ಲಿ?) ಎಂದು ಮಾಢವ್ಯನೊಡನೆ ಶಕುಂತಲೆಯ ಕುರಿತುಳ್ಳ ವಿಚಾರವನ್ನು ಒತ್ತಿಟ್ಟು ಪರಿಹಾಸ ವಚನವೆಂದು ಹೇಳಿರುವನು. ಶಕುಂತಲೆ ಹರಿಣ ಶಿಶುಗಳೊಂದಿಗೆ ಬಳೆದವಳೆಂದು ಹೇಳಿರುವನು. ಶಕುಂತಲೆಯು ಇಲ್ಲಿ ಹರಿಣ ಶಿಶುವಿನ ಮಾತನ್ನೆತ್ತಿದ್ದಾಳೆ. ಜಿಂಕೆ ಮರಿಯ ಸುದ್ದಿ ತೆಗೆದು ಆಶ್ರಮದಲ್ಲಿದ್ದಾಗ ದುಷ್ಯಂತನು ಶಕುಂತಲೆಯ ಪ್ರೇಯೋ ಸಾಧನೆಗಾಗಿ ಹೇಗೆ ನಡೆದಿರುವನೆಂದು ರೂಪಿಸಿ ಬಿಟ್ಟರುವಳು. ಶಕುಂತಲೆ ಹೇಳತಕ್ಕ ಮಾತನ್ನು ಹೇಳಿದಳು. "ಏವಮಾದಿಭಿರಾತ್ಮಕಾರ್ಯನಿವರ್ತಿನೀನಾಮನೃತಮಯ ವಾಙ್ಮಧುಭಿರಾಕರ್ಷ್ಯಂತೇ ವಿಷಯಿಣಃ" (ಈ ರೀತಿಯ ಸ್ವಕಾರ್ಯವನ್ನು ಸಾಧಿಸುವ ಹೆಂಗುಸರ ಸುಳ್ಳು ತುಂಬಿದ ಜೇನ್ನುಡಿಯಿಂದ ವಿಷಯಿಗಳು ಆಕರ್ಷಿಸಲ್ಪಡುವರು) ಎಂದು ದುಷ್ಯಂತನ ಉತ್ತರವೂ ದೊರಕಿತು. ತಾಪಸಿಯಾದ ಗೌತಮಿಯು "ಮಹಾಭಾಗನೆ! ನೀನೀ ರೀತಿಯಿಂದ ಯೋಚನೆಗೊಳ್ಳುವುದು ಯುಕ್ತವಲ್ಲ. ತಪೋವನದಲ್ಲಿ ಬಳೆದ ಈಕೆ ಆ ರೀತಿಯ ಬೆಡಗುಗಾರಿಕೆ ತಿಳಿದವಳಲ್ಲ"ವೆಂದು ಸಮಾಧಾನಿಸಿದಳು. ದುಷ್ಯಂತನ ತುಟಿಗೆಳು ಕೂಡಲೇ ಒಡೆದವು. ತಾಪಸ ವೃದ್ಧೇ!

"ಸ್ತ್ರೀಣಾಮಶಿಕ್ಷಿತ ಪಟುತ್ವ ಮಮಾ ನುಷೀಷು.
ಸಂದೃಶ್ಯತೇ ಕಿಮುತಯಾಪ್ರತಿಬೋಧವತ್ಯಃ।
ಪ್ರಾಗಂತರಿಕ್ಷಗಮನಾತ್ಸ್ವಮಪತ್ಯ ಜಾತ–
ಮನ್ಯೈರ್ದ್ವಿಜೈಃಪರಭೃತಾಃಖಲುಪೋಷಯಂತಿ।

(ತಾಪಸ ವದ್ಧೇ! ಹೆಂಗುಸರಲ್ಲಿ ಶಿಕ್ಷಣದ ವಿನಾ ಜಾಣತನ ತೋರಬರುವುದು. ಇದನ್ನು ಮಾನುಷೇತರ ಜೀವಿಗಳಲ್ಲಿ ನಾವು ಕಾಂಬೆವು. ಆಕಾಶಕ್ಕೆ ನೆಗೆವ ಮುನ್ನ ಕೋಗಿಲೆಗಳು ತಮ್ಮ ಮರಿಗಳನ್ನು ಕಾಗೆಗಳಿಂದ ಪೋಷಿಸುತ್ತವೆ. ಇಂತಿರಲು ಶಿಕ್ಷಾಜ್ಞಾನವಿರುವವರ ಕುರಿತು ಒರೆಯ ಬೇಕೇ?) ಎಂಬೀ ದುಷ್ಯಂತನ ಮಾತು ಗೌತಮಿಯ ಬಾಯನ್ನು ಕಟ್ಟಿದವು. ಕೋಗಿಲೆ ಮರಿ ರೆಕ್ಕೆ ಬಲಿಯುವ ವರೇಗೆ ಕಾಗೆಯ ಗೂಡಿನಲ್ಲಿದ್ದು ಆ ಬಳಿಕ ಆಕಾಶಕ್ಕೆ ಹಾರುವುದು. ಶಕುಂತಳೆಯು ಮುಂದೆ ಜೀವನದಿಂದ ಇಂತಾದಳು.

ಶಕುಂತಲೆ ರಾಜನ ನುಡಿಗೆ ರೇಗಿ "ಅನಾರ್ಯ ಆತ್ಮನೋ ಹೃದಯಾನು ಮಾನೇನ ಪಶ್ಯಸಿ. ಕಇದಾನಿಮನ್ಯೋ ಧರ್ಮ ಕಂಚು ಕಪ್ರವೇಶಿನಸ್ತೃಣಚ್ಛನ್ನ ಕೂಪೋಪಮಸ್ಯ ತವಾನು ಕೃತಿಂ ಪ್ರತಿಪತ್ಸ್ಯತೇ" (ಅನಾರ್ಯ! ನನ್ನನ್ನು ಹೃದಯದಲ್ಲಿ ಸಂಶಯವಿಟ್ಟು ಕಾಂಬೆಯಾ! ನ್ಯಾಯಾಧಿಕರಣ ಸ್ಥಾನವನ್ನು ಪಡೆದ, ಹುಲ್ಲು ಮುಸುಕಿದ ಬಾವಿಯ ಸದೃಶನಾದ ನಿನ್ನ ವಿಚಾರವನ್ನು ತಿಳಿವರಾರು.) ಎಂದು ನ್ಯಾಯದ ನುಡಿಗೊಟ್ಟಳು. ದುಷ್ಯಂತನು ಮನದಲ್ಲೇ ನೊಂದನು. ತನ್ನ ನಡೆ ಎಲ್ಲರೂ ಬಲ್ಲನಡೆಯೆಂದು ಗೌರವದಿಂದ ನುಡಿದನು.

"ಸುಷ್ಟು ತಾವದತ್ರ ಸ್ವಚ್ಛಂದ ಚಾರಿಣೀ ಕೃತಾಸ್ಮಿ ಯಾಹಮಸ್ಯ ಪುರು ವಂಶ ಪ್ರತ್ಯಯೇನ ಮುಖಮಧೋ ಹೃದಯಸ್ಥಿತ ವಿಷಸ್ಯ ಹಸ್ತಾಭ್ಯಾಶಮುಪ ಗತಾ" (ನಾನು ಸ್ವೈರ ವರ್ತನೆಯ ಹೆಂಗುಸಾಗಿ ಮಾಡಲ್ಪಟ್ಟೆನು. ಪುರು ವಂಶದ ನಂಬುಗೆಯಿಂದಲೂ ಜೇನು ಸವರಿದ ನುಡಿಯಿಂದಲೂ ವಿಷ ಹೃದಯ ನಾದ ನಿನ್ನ ಕೈ ಬಳಿ ಸೇರಿದೆ) ಎಂದು ದುಷ್ಯಂತನಿಗೆ ಹೇಳಿ ಕಣ್ಣೀರ್ಗರೆದಳು.

ಮುನಿ ಶಿಷ್ಯನಾದ ಶಾಂರ್ಗರವನು ಈ ಹೊತ್ತು ಸುಮ್ಮನಿರದೆ ಬೋಧಾ ವಚನವನ್ನೇ ಹೇಳತೊಡಗಿದನು.

"ಅತಃ ಪರೀಕ್ಷ್ಯ ಕರ್ತವ್ಯಂ ವಿಶೇಷಾತ್ಸಂಗತಂ ರಹಃ ॥
ಅಜ್ಞಾತ ಹೃದಯೇಷ್ವೇವಂ ವೈರೀ ಭವತಿ ಸೌಹೃದಂ॥

(ಗೆಳೆತನ ಪರೀಕ್ಷಿಸಿಯೇ ಬಳೆಸಬೇಕು. ಏಕಾಂತದ ಸಂಗಾತಿಗಳನು ಇನ್ನೂ ವಿಶೇಷವಾಗಿ ಪರೀಕ್ಷಿಸುವುದು. ವ್ಯವಹಾರಾದಿಗಳಿಂದ ತಿಳಿಯದ ಮಂದಿಗಳಲ್ಲಿ ಬಳೆಸಿದ ಗೆಳೆತನ ಈ ರೀತಿ ವಿರೋಧಗೊಳ್ಳುವುದು). ಶಾಂರ್ಗ ರವನು ಹೇಳಿದ ಈ ಮಾತು ಉಜ್ವಲವಾಗಿದೆ. ಶಕುಂತಲೆ ಮುಂದೆ ಮಾತೆತ್ತ ಲಿಲ್ಲ. ಅಳುವೇ ಆಕೆಯ ಜೀವನವಾಯಿತು. ಮುನಿಶಿಷ್ಯರ ಮಾರ್ಗವನ್ನು ಅನುಸರಿಸ ಹೊರಟಳು. ಆಗ ಅವರು ತಡೆದರು. ಸ್ವಭಾಗ್ಯವನ್ನು ಕುರಿತು ಹಳಿದು ಮೊರೆಯಿಡುವ ಶಕುಂತಳೆ ಮೇನಕೆಯ ಪ್ರೀತಿಗೆ ಪಾತ್ರಳಾದಳು. ಅವಳು ಮಾರೀಚನಲ್ಲಿಗೊಯ್ದು ಸಂತವಿಸಿದಳು. ಕಾಳಿದಾಸನು ಶಕುಂತಲೆಯ ಜೀವನಕ್ಕೆ ಮಿರುಗು ಬರುವಂತೆ ಆಕೆಯ ನುಡಿಯನ್ನು ಕೊಟ್ಟಿದ್ದಾನೆ. ದುಷ್ಯಂತನಿಗಿಂತ ಶಕುಂತಲೆಯಲ್ಲಿ ಮಹತ್ವವನ್ನು ತೋರಿ ಸ್ತ್ರೀ ಜಾತಿಯಲ್ಲಿ ಗೌರವವನ್ನು ತೋರಿದ್ದಾನೆ. ಮಹಿಳೆಯರಿಗೆ ಆದರ್ಶ ಮಾರ್ಗವನ್ನು ಕಡಿದುಕೊಟ್ಟಿರುವನು.

# ಮಹಿಳೆಯರಿಗೆ ಮಾಂಗಲ್ಯವನ್ನೊರೆವ ಕಾಳಿದಾಸ

ಕವಿ ಸಾರ್ವಭೌಮ ಕಾಳಿದಾಸನು ತನ್ನ ಗ್ರಂಥಗಳಲ್ಲಿ ಭಾರತದ ಮಹಿಳೆಯರ ಪ್ರಗತಿಗಿರುವ ಮಾಂಗಲ್ಯ ಸಾಧನೆಯ ಸಂದೇಶವನ್ನು ಅಲ್ಲಲ್ಲಿ ಹೇಳಿರುವನು. ಶೃಂಗಾರ ರಸ ಪ್ರಿಯನಾದ ಈ ಕವಿ ಮಹಿಳೆಯರ ಗೌರವಕ್ಕೆ ಕಡಿಮೆಯುಂಟಾಗುವ ಚರಿತ್ರೆಯನ್ನು ತಿದ್ದಿಕೊಳ್ಳಲಿರುವ ಮಾರ್ಗವನ್ನು ತೋರಿದ್ದಾನೆ. ಗಾಂಧರ್ವ ವಿವಾಹದ ಸುಖ ದುಃಖವೆಂತಹುದು? ಅದಕ್ಕೆ ಮನಗೊಡುವುದು ಸಮಂಜಸವಲ್ಲ. ಸ್ತ್ರೀಯರಿಗೆ ಪತಿಗೃಹ ವಾಸವೇ ಹಿತ; ಎಂಬಿವೇ ಮೊದಲಾದ ವಿಚಾರಗಳನ್ನು ಅಭಿಜ್ಞಾನ ಶಾಕುಂತಲಾ ನಾಟಕದ ಮೂಲಕ ತಿಳಿವಂತೆ ಮಾಡಿದ್ದಾನೆ. ಧರ್ಮದಿಂದ ಪಾರ್ವತಿ ಶಿವನನ್ನು ಗೆದ್ದಳು. ನಾರಿಯರಿಗೆ ಧರ್ಮದ ಮೂಲಕ ಈಶ್ವರನನ್ನೂ ಗೆಲ್ಲುವ ಶಕ್ತಿಯಿದೆಯೆಂಬುದು ಕುಮಾರಸಂಭವದಿಂದ ತಿಳಿಯಬರುತ್ತಿರುವುದು. ಕುಮಾರ ಸಂಭವದಲ್ಲಿ ಸುಬ್ರಹ್ಮಣ್ಯನ ಉತ್ಪತ್ತಿಯ ಕತೆ ಇದೆ. ಇದರಲ್ಲಿ ಸತಿಯು ದಕ್ಷನ ಯಜ್ಞಕುಂಡದಲ್ಲಿ ಮರಣಗೊಂಡು ಆ ಬಳಿಕ ಪರ್ವತನ ಮಗಳಾಗಿ ಜನಿಸಿದಳು; ಎಂಬಲ್ಲಿಂದ ಕಥಾಭಾಗವು ಮುಂದರಿಯುತ್ತದೆ. ಕುಮಾರ ಸಂಭವದ ಎಂಟನೆ ಸರ್ಗ ಸಂಪೂರ್ಣ ಶೃಂಗಾರಪ್ರಚುರ. ಎಂಟನೆಯ ಸರ್ಗದಿಂದ ಕಾಳಿದಾಸನ ಕೃತಿಯಲ್ಲವೆಂದು ಕೆಲವರ ಮತ. ಉಳಿದ ಭಾಗ ಅನ್ಯ ಕಾಳಿದಾಸನ ಸಂಕಲನವೆಂದು ಹೇಳುವರು. ಕಾಳಿದಾಸನು ರತಿಯ ಮೂಲಕ ಯಾರ ಮಾರ್ಗವನ್ನು ಅನುಸರಿಸಿ ನಡೆಯತಕ್ಕವರೆಂದು ಸ್ಪಷ್ಟವಾಗಿ ಸಾರಿದ್ದಾನೆ.

ಕಾಮನೊಂದಿಗೆ ಶಿವನ ತಪೋಸ್ಥಾನಕ್ಕೆ ರತಿ ತೆರಳಿದ್ದಳು. ಶಿವನು ತನ್ನ ಮನೋವಿಕಾರಕ್ಕೆ ಕಾರಣವೇನೆಂದು ನಾಲ್ದೆಸೆಗೂ ಕಣ್ಣನ್ನು ಹರಡಿದನು. ದೇವತೆಗಳ ಯಾಚನೆಯನ್ನು ಪೂರಯಿಸುವುದಕ್ಕಾಗಿ ಬಾಣಮುಷ್ಟಿಗೊಂಡ ಕಾಮನನ್ನು ಕಂಡನು. ಕಾಮನು ಮಾಡುತ್ತಿರುವ ದುರ್ವರ್ತನೆಗೆ ಕೆರಳಿದ ಶಿವನು ಉರಿಗಣ್ಣಿಕ್ಕಿದನು. ಕಾಮನ ದೇಹಾವಸಾನವು ಅದರಿಂದಲಾಯಿತು. ರತಿ ವಿಧುರೆ ಎನಿಸಿ ಬಾಳಿದಳು. ಕಲ್ಮರಗಳು ಕರಗುವಂತೆ ಮರುಗಿದಳು, ಆ ಮರುಕದ ರೋದನೆಯಲ್ಲಿ ಸ್ತ್ರೀಯರ ಜೀವನಕ್ಕೆ ಮಾಂಗಲ್ಯಕರವಾದ ಬೋಧೆಯಾಗುತ್ತದೆ. ಅವುಗಳಲ್ಲಿ—

ಶಶಿನಾ ಸಹಯಾತಿ ಕೌಮುದೀ ಸಹ ಮೇಘೇನ ತಡಿತ್ಪ್ರಲೀಯತೇ।
ಪ್ರಮದಾ ಪತಿಪತಿವರ್ತ್ಮಗಾ ಇತಿ ಪ್ರತಿಪನ್ನಂ ಹಿ ವಿಚೇತನೈ ರಪಿ ॥

ಎಂಬೀ ನುಡಿಯು ಅರ್ಥಗರ್ಭಿತ. "ಬೆಳದಿಂಗಳು ಚಂದ್ರನನ್ನೇ ಅನುಸರಿಸಿರುವುದು. ಮೋಡದೊಂದಿಗೆ ಮಿಂಚು ಅಡಗುತ್ತಿದೆ. ಹೆಂಗಸರು ಪತಿಯು ಮಾರ್ಗವನ್ನೇ ಅನುಸರಿಸಿ ನಡೆಯುವರು. ಇದು ವಿಚೇತನ ವಸ್ತುಗಳಲ್ಲೂ ಕಾಣಬರುತ್ತಿದೆ." ರತಿ ಮಾತ್ರ ಹೀಗುಳಿಯಲೇಕೆ? ಎಂದು ಆಕೆ ರೋದಿಸುವಳು. ರೋದನೆಯ ಈ ನುಡಿಯಲ್ಲೂ ಸ್ತ್ರೀಯರು ಪತಿ ಪರಾಯಣೆಯರು. ಪತಿ ಮಾರ್ಗಾನುಸರಣೆಯೇ ಅವರ ಮುಖ್ಯ ಕರ್ಮವೆಂದು ಹೇಳಿದ್ದಾಳೆ. ನಿರ್ಜೀವ ವಸ್ತುಗಳನ್ನು ತೋರಿ ಜೀವಿತೆಯರಾಗಿದ್ದು ಬುದ್ಧಿಶಕ್ತಿಯುಳ್ಳ ಹೆಮ್ಮಕ್ಕಳು ಮಾಡತಕ್ಕ ಕರ್ಮ ಇದು ಎಂದು ಇಲ್ಲಿ ತಿಳಿಯಬರುತ್ತಿರುವುದು. ಕಾಳಿದಾಸನು ಕೊಟ್ಟ ದೃಷ್ಟಾಂತಗಳಲ್ಲಿ ಇನ್ನೂ ಸ್ವಾರಸ್ಯವಿದೆ. ಮಾಧುರ್ಯವಿದೆ. ಕಳೆಗೊಂಡಂತೆ ಚಂದ್ರನ ಬೆಳದಿಂಗಳು ಹೆಚ್ಚುತ್ತಿದೆ. ಚಂದ್ರನು ಬಳಿದಂತೆ ಚಂದ್ರಿಕೆಯ ಬಳೆಯುವಿಕೆ ಕಾಣುತ್ತಿದೆ. ಗಂಡು ಹೆಣ್ಣುಗಳ ವೃದ್ಧಿ ಇಂತಿರಬೇಕು. ಚಂದ್ರ ಕುಂದಿದಂತೆ ತಿಂಗಳ ಬೆಳಕು ಕುಂದುತ್ತದೆ. ಪತಿ ದುಃಖಿತನಾದಾಗ ಸ್ತ್ರೀ ಅದೇ ನೆಲೆ ಹೊಂದುತ್ತಿರುವಳು. ವೃದ್ಧಿ ಕ್ಷಯಗಳೆರಡು ಜೊತೆಗಾರರ ಜೀವನದ ಸಮಾಂಶಗಳು. ಇವೆರಡರಲ್ಲೂ ಅವರು ಪಾಲುಗಾರರಿದ್ದಾರೆ. ಎಂದು ಕಾಳಿದಾಸನು ತಿಳಿಸಿದ್ದಾನೆ.

ಮೋಡ ಮಿಂಚು ಇವೆರಡು ಸಹಚರಗಳು. ಸಹಚರರ ಜೀವನ ಇಂತಿರಬೇಕು. ಗುಡುಗು ಮೋಡದ ಮುಖೇನ ಉಂಟಾಗುತ್ತದೆ. ಮಿಂಚು ಮೋಡವನ್ನು ಬಿಟ್ಟಿಲ್ಲ. ಮೋಡದ ರಭಸದ ಜೀವನದಲ್ಲಿ ಮಿಂಚು ಕಾಣುವುದು. ಹೆಂಗಸರು ಪತಿಯನ್ನು ಹೊಂದಿ ಮೋಡದ ಮಿಂಚಿನಂತಿರುತ್ತಾರೆ. ಮೋಡ ಮಿಂಚು ಅಭಿನ್ನಗಳು. ಗಂಡ ಹೆಂಡಿರು ಅಭಿನ್ನರಾಗಬೇಕು. ಸ್ತ್ರೀಯರು ಮಿಂಚಿನಂತಹರು. ಮಿಂಚಿನ ಜೀವನ ಶಕ್ತಿ ಅವರಿಗಿದೆ. ಸ್ತ್ರೀಯರನ್ನು ಆರಾದರೂ ಮುಟ್ಟ ಹೋದರೆ ಮಿಂಚನ್ನು ಮುಟ್ಟ ಹೋದನನ ನೆಲೆಯಾಗಬೇಕು. ಆ ಶಕ್ತಿ ನಾರಿಯರಲ್ಲಿ ಕಾಣಬೇಕು. ಎಂದು ಕಾಳಿದಾಸನು ಸಂಕೇತಿಸಿದ್ದಾನೆ. ಸ್ತ್ರಿಯರ ಜೀವನಕ್ಕೆ ಮಾಂಗಲ್ಯವನ್ನು ಬೋಧಿಸಿದ್ದಾನೆ. ವಿದ್ಯುತ್ತಿನ ಶಕ್ತಿ ನಾರೀ ಜೀವನದ ಶಕ್ತಿಯೆಂದು ತೋರಿದ್ದಾನೆ.

"ಪ್ರಿಯೇಷು ಸೌಭಾಗ್ಯ ಫಲಾಹಿ ಚಾರುತಾ" ಸ್ತ್ರೀಯರ ಚೆಲುವು ಪತಿ ಸೌಭಾಗ್ಯ ಪ್ರಾಪ್ತಿಗೆ ಕಾರಣವೆಂದು ಪಾರ್ವತಿಯು ತಪಸ್ಸಿಗೆ ತಿರುಗಿ ಹೊರಟಾಗ ಕಾಳಿದಾಸನು ಹೇಳಿರುವನು. ಪಾರ್ವತಿಯನ್ನು ವಿವಾಹಕ್ಕೆ ಯೋಗ್ಯವಾದ ಉಡಿಗೆಯಿಂದ ನಾರಿಯರು ಸಿಂಗರಿಸಿದರು. ಆ ಬಳಿಕ ಆಕೆ

ಕನ್ನಡಿಯಲ್ಲಿ ತನ್ನ ಬಿಂಬವನ್ನು ನೋಡಿದಳು. ಅದನ್ನು ಕಂಡು ಶಿವನ ಮದುವೆಗೊಳ್ಳಲು ತ್ವರೆಗೊಂಡಳು. ಸ್ತ್ರೀಯರ ವೇಷ ಪತಿದೃಷ್ಟಿಗೆ ಫಲ ರೂಪ"ವೆಂದು ಕಾಳಿದಾಸನು ಹಿತರೀತಿಯಿಂದಲೇ

ಆತ್ಮಾನಮಾಲೋಕ್ಯ ಚ ಶೋಭಮಾನಮಾದರ್ಶಬಿಂಬೇ ಸ್ತಿಮಿತಾಯತಾಕ್ಷೀ।
ಹರೋಪಯಾನೇ ತ್ವರಿತಾಬಭೂವ ಸ್ತ್ರೀಣಾಂ ಪ್ರಿಯಾಲೋಕಫಲೋಹಿ ವೇಷಃ।

ಎಂದು ನುಡಿದಿದ್ದಾನೆ.

ಪಾರ್ವತಿ ತಪಶ್ಚರಣೆಗೆಯ್ದಳು. ವಟು ವೇಷಧಾರಿಯಾಗಿ ಶಿವನು ಅವಳ ತಪೋಸ್ಥಾನಕ್ಕೆ ಬಂದನು. ಪಾರ್ವತಿಯ ಆತಿಥ್ಯಗೊಂಡನು. ವಿಧಿ ಪ್ರಯುಕ್ತವಾದ ಸತ್ಕಾರವನ್ನು ಸ್ವೀಕರಿಸಿ ಅಲ್ಪ ದಣುವಾರಿಸಿ ಪಾರ್ವತಿಯನ್ನು ಋಜುದೃಷ್ಟಿಯಿಂದ ನೋಡತೊಡಗಿದನು. ಮುಂದೆ ಕ್ರಮ ತಪ್ಪದೆ ಮಾತಿಗೆ ಮೊದಲುಮಾಡಿದನು. ಕೊನೆಗೆ "ಸ್ವರ್ಗವನ್ನು ಅಭಿಲಷಿಸುವೆಯಾದರೆ ಈ ತಪಸ್ಸೇಕೆ? ನಿನ್ನ ತಂದೆಯ ಮನೆ ದೇವಭೂಮಿ. ವರನನ್ನು ಪ್ರಾರ್ಥಿಸುವೆ ಯಾದರೆ ತಪಸ್ಸನ್ನು ಇಲ್ಲಿಗೇ ಸಾಕುಮಾಡು. ರತ್ನವು ಹುಡುಕುವುದಲ್ಲ. ರತ್ನವನ್ನು ಹುಡುಕಲಾಗುವುದು." ಎಂದು ಹೇಳಿ ತಪಸ್ಸಿಗಿರುವ ಕಾರಣ ವನ್ನರಿಯಲನುವಾದನು. ಎಷ್ಟು ಕಾಲ ಬಳಲುವೆ. ನನಗೂ ಪ್ರಥಮಾ ಶ್ರಮದಲ್ಲಿ ಸಂಗ್ರಹಿಸಿದ ತಪಸ್ಸಿದೆ. ಅದರ ಅರ್ಧ ಭಾಗದಿಂದ ಇಚ್ಛೆಗೊಂಡ ವರಪ್ರಾಪ್ತಿಗೊಳ್ಳು. ಅದಾವ ಎಣಿಕೆಯೆಂದು ತಿಳಿವ ಹಂಬಲು ನನ್ನದೆಂದು ವಟುವೇಷದ ಶಿವನೊರೆಯಲು ಸಖಿಯ ಮೂಲಕ ಶಿವನೊಲುಮೆಗಾಗಿ ಈ ತಪಸ್ಸೆಂದು ತಿಳಿಯಬಂದಿತು. ವಟುರೂಪದ ಶಿವನಿಗೆ ಮನಸ್ಸಿನಲ್ಲಿ ಹರ್ಷ ತುಂಬಿತು. ಅದನ್ನು ಹೊರಗೆಡವದೆ ಶಿವನನ್ನು ಕುರಿತು ಪರಿಹಾಸಗೊಂಡನು. ಪಾರ್ವತಿ ಅದಕ್ಕೆ ಉತ್ತರಿಸಿದಳು. ವಟುವು ಪಾರ್ವತಿಯ ಧಿಕ್ಕಾರ ವಚನ ಕ್ಕೀಡಾದನು. ಪಾರ್ವತಿ ಬೇರೆಡೆಗೆ ತಪಸ್ಸುಮಾಡಹೊರಡಲು ಶಿವನು ಕಣ್ಣು ಮುಂದೆ ಬಂದು "ಇಂದು ಮೊದಲುಗೊಂಡು ತಪಸ್ಸಿನಿಂದ ಕೊಂಡ ದಾಸನು ನಾನು", ಎಂದೊರೆದು ಆಕೆಗೆ ತನ್ನ ದರ್ಶನವಿತ್ತನು. ಪಾರ್ವತಿ ಕೂಡಲೇ ಸುಮ್ಮ ನುಳಿಯಲಿಲ್ಲ. ಶಿವನಿಗೆ ದೂತಿಯ ಮೂಲಕ ತಂದೆಯನ್ನು ಕೇಳಿ ಮದುವೆ ಯಾಗೆಂದು—ತಂದೆಯ ಮೂಲಕ ಉಂಟಾದ ಮದುವೆ ತನ್ನ ಸುಖಕ್ಕೆ ಕಾರಣ ವೆಂದು ಬಗೆದಳು. ಕಾಳಿದಾಸನು ದೈವೀ ವಿವಾಹದ ಕಟ್ಟನ್ನೇ ಪಾರ್ವತಿಯ ಮದುವೆಯಲ್ಲಿ ಬಯಸಿದ್ದಾನೆ. ಪ್ರಾಚೀನರು ಎಂಟು ಬಗೆಯ ವಿವಾಹವನ್ನು ಹೇಳಿದ್ದಾರೆ. ಅದರಲ್ಲಿ ದೈವೀ ವಿವಾಹವೇ ಶ್ರೇಯಸ್ಕರವೆಂದು ಸರ್ವರ

ಸಮ್ಮತ. ಗಾಂಧರ್ವ, ರಾಕ್ಷಸ, ಪೈಶಾಚಾದಿ ವಿವಾಹಗಳು ನಡೆವವಾದರೂ ಅವುಗಳ ಸ್ಥಾನಮಾನ ಗತಿ ಬೇರೆ. ಸ್ತ್ರೀಯರಿಗೆ ವಿವಾಹ ವಿಚಾರದಲ್ಲಿ ಹಿರಿಯರ ಮೂಲಕ ನಡೆವ ದೈವೀ ವಿವಾಹವೇ ಶ್ರೇಯಸ್ಕರವೆಂದು ಕಾಳಿದಾಸನು ಸಾರಿದ್ದಾನೆ.

ಶಿವನು ತನ್ನ ಕಡೆಯವರನ್ನಾಗಿ ಸಪ್ತರ್ಷಿಗಳನ್ನು ಮಾಡಿ, ಹಿಮವಂತನಲ್ಲಿಗೆ ಅಟ್ಟಿದನು. ಅರುಂಧತಿಯನ್ನು ಸತ್ಕರಿಸಿ ಕನ್ಯಾ ಪರಿಗ್ರಹದ ಮಾತುಕತೆಯಲ್ಲಿ ಸ್ತ್ರೀಯರಿಗೇ ದೊಡ್ಡ ನೆಲೆಯೆಂದು ಹೇಳಿ ಹುಡುಗಿಯನ್ನು ನೋಡಲು ಕಳುಹಿಸಿದನು. ಕಳುಹುವ ವೇಳೆ ಶಿವನು ಋಷಿಗಳಿಗೆ ಹೇಳಿದ ಮಾತು ಇಂದಿನ ಲೋಕಕ್ಕೆ ತಿಳಿದಿರಬೇಕು.

ತಾಮಸ್ಮದರ್ಥೇ ಯುಷ್ಮಾಭಿರ್ಯಾಚಿತವ್ಯೋ ಹಿಮಾಲಯಃ ।
ವಿಕ್ರಿಯಾಯೈ ನ ಕಲ್ಪಂತೇ ಸಂಬಂಧಾಃ ಸದನುಷ್ಠಿತಾಃ ॥

(ನನಗೋಸುಗ ನಿಮ್ಮಿಂದ ಪಾರ್ವತಿಯ ಯಾಚನೆ ಹಿಮಾಲಯನಲ್ಲಾಗಬೇಕು. ಸಜ್ಜನರಾದ ಸಾಮಾಜಿಕರಿಂದ ಘಟಿಸಿದ ಸಂಬಂಧ ವೈಕಲ್ಯೋತ್ಪಾದನೆಗಾಗುವುದಿಲ್ಲ.) ಎಂಬೀ ಮಾತು ಎಷ್ಟು ಆಳವಾಗಿದೆ! ವಿವಾಹ ಸಂಬಂಧ ಘಟನೆ ಸಭ್ಯ ಸಮಾಜದಿಂದ ನಡೆಯಬೇಕು. ಅಲ್ಲವಾದರೆ ಘಟಿಸಿದ ಸಂಬಂಧದಲ್ಲಿ ಒಡಕಿದೆ. ಒಡಕಾಗದಂತೆ ವಿವಾಹ ಸಂಬಂಧವನ್ನು ಘಟಿಸುವುದೇ ಮುಖ್ಯ.

ಶಿವನು ಋಷಿಗಳಿಗೆ ಮತ್ತೂ ಹೇಳುವನು. 'ಹಿಮವಂತನು ಹೆಣ್ಣು ಕೊಡುವಂತೆ ಹೀಗೆ ಹೇಳಬೇಕೆಂದು ನಿಮಗೆ ನಾನು ಉಪದೇಶಿಸಲಾರೆನು. ಸಜ್ಜನರು ಮಾಡುತ್ತಿರುವ ಆಚಾರ ನಿಮ್ಮಿಂದ ನಿರ್ಮಿತವಾದುದು. ಅದರಂತೆ ಅವರು ನಡೆದು ಸುಖ ಪಡೆಯುತ್ತಿರುವರು. ಪೂಜ್ಯಳಾದ ಅರುಂಧತಿ ವಿವಾಹ ವಿಷಯದಲ್ಲಿ ಸಹಾಯಮಾಡಲು ಸಮರ್ಥಳಿರುವಳು. ಪ್ರಾಚುರ್ಯದಿಂದ ವಿವಾಹಾದಿ ಕೆಲಸಗಳಲ್ಲಿ ಕುಟುಂಬಿನಿಯರಾದ ಹೆಂಗಸರಿಗೇ ಚಾತುರ್ಯ. ಆದ್ದರಿಂದ ತಾವು ಓಷಧಿ ಪ್ರಸ್ಥಕ್ಕೆ ತೆರಳಿರೆಂದು ಶಿವನು ಹೇಳುವನು.

ಏವಂ ವಾಚ್ಯಃ ಸಕನಾರ್ಥಮಿತಿ ವೋ ನೋಪದಿಶ್ಯತೇ ।
ಭವತ್ಪ್ರಣೀತಮಾಚಾರಮಾಮನಂತಿ ಹಿ ಸಾಧವಃ ॥
ಆರ್ಯಾಪ್ಯರುಂಧತೀ ತತ್ರ ವ್ಯಾಪಾರಂ ಕರ್ತುಮರ್ಹತಿ ।
ಪ್ರಾಯೇಣೈವಂ ವಿಧೇಕಾರ್ಯೆ ಪುರಂಧ್ರೀಣಾಂ ಪ್ರಗಲ್ಭತಾ ।

ಕಾಳಿದಾಸನು ಹೇಳಿದ ಮಾತುಗಳು ನಿಜವಾಗಿಯೂ ಎಷ್ಟು ಸಹಜವಾಗಿವೆ! ವಿವಾಹಾದಿ ಶುಭಕಾರ್ಯ ಘಟನೆಯಲ್ಲಿ ಋಷಿಗಳಂತಹ ಜನರು

ಬೇಕು; ಅದಲ್ಲದೆ ಅರುಂಧತಿಯಂತಹ ಕುಟುಂಬಿನಿಯರೂ ಬೇಕು. ಋಷಿ ಸಮಾನ ವ್ಯಕ್ತಿಗಳೂ ಅರುಂಧತೀ ಸಮಾನ ಗೃಹನಾಯಿಕೆಯರೂ ಕೂಡಿಯೇ ಕನ್ಯಾ ಸ್ವೀಕಾರ ಪ್ರಶ್ನೆ ನಡೆಯಬೇಕು. ಅಲ್ಲವಾದರೆ ಅದು ಸರಿಯಾದ ಸಂಬಂಧವಾಗಲಾರದು. ವಿವಾಹ ಬಂಧದ ದಾಂಪತ್ಯ ಜೀವನವನ್ನು ಕಟ್ಟು ವಲ್ಲಿ ಈ ಮಾರ್ಗ ಆದರಣೀಯ.

ಸಪ್ತರ್ಷಿಗಳು ಕನ್ಯಾರ್ಥಿಗಳಿಗಾಗಿ ಹಿಮವಂತನಲ್ಲಿಗೆ ತೆರಳಿದರು. ಅವರನ್ನು ಹಿಮಾಲಯನು ದೂರದಿಂದಲೇ ಎದುರುಗೊಂಡು ಸತ್ಕರಿಸಿದನು. ಆ ಬಳಿಕ ವಿಧಿಯಂತೆ ತಾನೇ ಮಾರ್ಗದರ್ಶಕನಾಗಿ ನಿಂತು ಅಂತಃಪುರದೊಳಗೆ ಅವರನ್ನು ಕರೆದೊಯ್ದನು. ಅಂತಃಪುರದಲ್ಲಿ ಬೆತ್ತದ ಆಸನದಲ್ಲಿ ಅವರನ್ನೆಲ್ಲಾ ಮಂಡಿಸಲು ಕೇಳಿಕೊಂಡು ಕುಶಲ ಪ್ರಶ್ನೆಗಾರಂಭಿಸಿದನು.

ಮುನಿ ಪುಂಗವರೇ! ತಮ್ಮ ಆಗಮನ ಅನಿರೀಕ್ಷಿತ. ಇದರಿಂದ ನಾನು ಮೇಘೋದಯಗೊಳ್ಳದೆ ಮಳೆಗೊಂಡಂತೆಯೂ ಹೂವಾಗದೆ ಫಲಗೊಂಡಂತೆ ಯೂ ಆದೆನು. ತಮ್ಮ ಅನುಗ್ರಹದಿಂದ ಮೂಢನು ಬುದ್ಧಿಗೊಂಡಂತೆಯೂ, ಕಬ್ಬಿಣ ಚಿನ್ನವಾದಂತೆಯೂ, ಭೂಮಿಯಿಂದ ಸ್ವರ್ಗಾರೂಢನಾದಂತೆಯೂ ತಿಳಿಯುತ್ತಿರುವೆನು. ಇಂದು ಮೊದಲು ನಾನು ಪ್ರಾಣಿಗಳ ಶುದ್ಧಿಯ ತೀರ್ಥ ವಾದೆನು. ತಾವು ಮಹಾ ಪುರುಷರು. ಮಹಾ ಪುರುಷರಿಂದ ಸೇವಿಸಿದ ಸ್ಥಾನ ತೀರ್ಥ. ಹೀಗಿರಲು ನಾನು ತೀರ್ಥರೂಪನಾದೆನೆಂಬುದರಲ್ಲಿ ಸಂದೇ ಹವೇನು? ತಮ್ಮ ಪಾದವನ್ನು ತೊಳೆದ ನೀರು, ಗಂಗೆಯ ನೀರು ಇವೆರಡರಿಂದ ನಾನು ಪವಿತ್ರನೆನಿಸಿದೆನು ಸ್ಥಾವರ ಜಂಗಮ ರೂಪದ ಎರಡು ಬಗೆಯ ದೇಹ ನನ್ನದು. ಜಂಗಮ ದೇಹ ತಮ್ಮ ಕಿಂಕರತನಕ್ಕೆ ಇದೆ. ಸ್ಥಾವರ ವಪು ತಮ್ಮ ಪಾದಗಳನ್ನು ಶಿರಸಾವಹಿಸುತ್ತಿದೆ. ದಿಗಂತಗಳನ್ನು ವ್ಯಾಪಿಸಿದ ಈ ದೇಹ ತಮ್ಮಗಳ ಸಂಭಾವನೆಯ ಮೂಲಕ ಉಂಟಾದ ಹರ್ಷದ ಅಳತೆ ಗೊಳ್ಳಲಾರದು. ಮುನಿ ಶ್ರೇಷ್ಠರಾದ ತಮ್ಮ ತೇಜೋ ದರ್ಶನದಿಂದ ಗುಹೆಯ ಕತ್ತಲೂ ಹೋಯಿತು. ಪಾದ ರಜಸ್ಸಿನಿಂದ ದೇಹದೊಳಗಣ ಅಜ್ಞಾನವೂ ದೂರವಾಯಿತು. ನನ್ನಿಂದ ಆಗತಕ್ಕ ಕರ್ತವ್ಯವಾವುದನ್ನೂ ಕಾಣಲಾರೆನು. ಆವುದಾದರೂ ಆಗಬೇಕಿದ್ದರೆ ಅದಕ್ಕೇ ನಾನು ಸನ್ನದ್ಧನು. ನನ್ನನ್ನು ಪಾವನ ಗೊಳಿಸಲಾಗಿಯೇ ತಮ್ಮ ಆಗಮನವಾಯಿತೆಂದು ನನ್ನೆಣಿಕೆ, ಹೆಚ್ಚು ತಮ್ಮಲ್ಲಿ ನಿವೇದಿಸಲೇಕೆ? ಹೆಂಡತಿ ಕುಲಜೀವಿತೆಯಾದ ಕನ್ನೆ ಈ ನಾವುಗಳಿರುವೆವು. ನಮ್ಮಿಂದಾಗತಕ್ಕ ಕಾರ್ಯವಾವುದು? ತಮಗೆ ಧನ ಕನಕ, ರತ್ನ ಮೊದಲಾ

ದುವುಗಳಲ್ಲಿ ಅನಾದರ. ಇಂತಿರಲು ನಮ್ಮಿಂದಾಗತಕ್ಕ ಕೆಲಸವನ್ನು ತಿಳಿಸಿರಿ, ಎಂಬ ಹಿಮವಂತನ ನುಡಿಗಳು ಗುಹೆಗಳಲ್ಲಿ ಪಡಿನುಡಿಗೊಂಡು ಎರಡು ಬಾರಿ ಕೇಳಿಕೊಂಡಂತಾಯಿತು.

ಸಪ್ತರ್ಷಿಗಳು ಪ್ರಧಾನನಾದ, ವಾಚಸ್ಪತಿಯನ್ನು ತಮ್ಮ ಮಾತಿಗೆ ಕೂಡಲೇ ಪ್ರೇರೇಪಿಸಿದರು. ಅಂಗಿರಸನ, ನುಡಿ ಬಹಳ ರುಚಿಕರ. ಅರ್ಥ ಗರ್ಭಿತ. ಕಾರ್ಯ ಸಾಧನೆಗೆ ಯೋಗ್ಯ, ಹಲವಾರು ಮಾತುಗಳನ್ನೊರೆದು ಕೊನೆಗೆ ಪ್ರಪಂಚದ ಸರ್ವಕರ್ಮ ಸಾಕ್ಷಿಭೂತನಾದ ಶಂಭುವು ನಮ್ಮ ಮಾತಿನ ಮೂಲಕ ತಮ್ಮ ಕನ್ನಿಕೆಯನ್ನು ವರಿಸುತ್ತಾನೆ. ನೀನು ನುಡಿಗೆ ಅರ್ಥದಂತೆ ಶಿವನಿಗೆ -ಮಗಳನ್ನು ಘಟಿಸು. ಒಳ್ಳೆಯ ಗಂಡನಿಗೆ ಕೊಟ್ಟ ಕನ್ನಿಕೆಯಿಂದ ತಂದೆಗೆ ಶೋಕವುಂಟಾಗದು. ಚರಾಚರವಾದ ಈ ವಿಶ್ವ ನಿನ್ನ ಕನ್ನೆಯನ್ನು ಮಾತೃವಾಗಿ ಪರಿಗ್ರಹಿಸಲಿ. ಶಿವನು ಜಗತ್ತಿನ ತಂದೆ. ದೇವ ತೆಗಳು ತಮ್ಮ ತಲೆಯ ರತ್ನ ಮುಕುಟಗಳಿಂದ ಶಿವನ ಪಾದತಲಗಳನ್ನು ರಂಜಿ ಸಲಿ. ಉಮೆ (ಪಾರ್ವತಿ) ವಧು. ನೀನು ದಾತಾರ, ಯಾಚಕರು ನಾವು, ವರನು ಶಂಭು, ನಿನ್ನ ಕುಲೋನ್ನತಿಗೆ ಇದಿಷ್ಟು ಸಾಲದೇ? ಮಗಳ ಈ ಸಂಬಂಧದಿಂದ ವಿಶ್ವಗುರುವ ಗುರುವಾಗಿ ನೀನು ಭವಿಸು." ಎಂದು ಹಿಮ ವಂತನೊಡನೆ ಅಂಗಿರಸನು ಬೇಡಿಕೊಂಡನು. ಕನ್ನಿಕೆಯರ ವಿವಾಹ ಸಂಬಂಧದ ಮಾತುಕತೆ ಹೇಗೆ ನಡೆಯಬೇಕೆಂಬುದು ಇದರಿಂದ ತಿಳಿಯಬರು ತ್ತದೆ. ಗಂಡುಹೆಣ್ಣುಗಳ ವಿವಾಹ ಸಂಬಂಧವನ್ನು ಮಾಡುವಲ್ಲಿ ಯಾವ ರೀತಿಯ ಮಾತುಕತೆಗಳು ನಡೆಯುತಿದ್ದುವು? ಹೇಗೆ ನಡೆಯಬೇಕು ಎಂಬುದು ಇದರಿಂದ ವಿಷದಗೊಳ್ಳುತ್ತಿದೆ. ಕಾಳಿದಾಸನು ಇದನ್ನು ತನ್ನ ಕುಮಾರ ಸಂಭವದ ಆರನೆಯ ಸರ್ಗದಲ್ಲಿ ಚೆನ್ನಾಗಿ ರೂಪಿಸಿದ್ದಾನೆ,

ಕಾಳಿದಾಸನು ಈ ಹೊತ್ತು ಪಾರ್ವತಿಯು ಏನು ಮಾಡುತಿದ್ದಳು, ಹಿಮವಂತನೇನು ಮಾಡಿದ ಎಂಬುದನ್ನು ಹೇಳುತ್ತಿರುವನು. ಆ ಮಾತುಗಳು ಇಂತಿವೆ: —

ಏವಂವಾದಿನಿ ದೇವರ್ಷೌ ಪಾರ್ಶ್ವೇ ಪಿತುರಧೋಮುಖೀ ।
ಲೀಲಾ ಕಮಲಪತ್ರಾಣಿ ಗಣಯಾಮಾಸ ಪಾರ್ವತೀ ॥

(ದೇವಋುಷಿ ಈ ಮಾತನ್ನು ಹೇಳುತಿದ್ದಾಗ ತಂದೆಯ ಬಳಿಯಲ್ಲಿ ತಲೆ ಕೆಳಗೆ ಮಾಡಿ ಪಾರ್ವತಿ ಲೀಲಾ ಕಮಲದ ಎಸಳನ್ನು ಎಣಿಸುತಿದ್ದಳು.) ಕನ್ನೆ ಯರು ತಮ್ಮ ದಾಂಪತ್ಯವೇ ಮೊದಲಾದ ಸಂಬಂಧವನ್ನೂ ಹಿತ ವಿಚಾರವನ್ನೂ

ನುಡಿವಲ್ಲಿ ತಲೆಬಾಗಿ ಇಂತೆಯೇ ಕಾಲ್ಬೆರಳಿನಿಂದ ನೆಲಗೀರುವುದು ಇತ್ಯಾದಿ ಚೇಷ್ಟೆಗೊಳ್ಳುವುದು ಸಹಜ. ಕಾಳಿದಾಸನು ಇದನ್ನು ಚೆಲುವಾಗಿ ಬಣ್ಣಿಸಿದ್ದಾನೆ.

ಶೈಲಃ ಸಂಪೂರ್ಣ ಕಾಮೋಪಿ ಮೇನಾಮುಖ ಮುದೈಕ್ಷತ।
ಪ್ರಾಯೇಣ ಗೃಹಿಣೀ ನೇತ್ರಾಃ ಕನ್ಯಾರ್ಥೇಷು ಕುಟುಂಬಿನಃ॥
ಮೇನೇ ಮೇನಾಪಿ ತತ್ಸರ್ವಂ ಪತ್ಯುಃ ಕಾರ್ಯಮಭೀಪ್ಸಿತಂ।
ಭವಂತ್ಯ ವ್ಯಭಿಚಾರಿಣ್ಯೋ ಭರ್ತುರಿಷ್ಟೇ ಪತಿವ್ರತಾಃ॥
ಇದಮತ್ರೋತ್ತರಂ ನ್ಯಾಯ್ಯಮಿತಿಬುದ್ಧ್ಯಾ ವಿಮೃಶ್ಯಸಃ ।
ಆದದೇ ವಚಸಾಮಂತೇ ಮಂಗಲಾಲಂಕೃತಾಂ ಸುತಾಂ ॥
ಏಹಿ ವಿಶ್ವಾತ್ಮನೇ ವತ್ಸೇ ಭಿಕ್ಷಾಸಿ ಪರಿಕಲ್ಪಿತಾ ।
ಅರ್ಥಿನೋ ಮುನಯಃ ಪ್ರಾಪ್ತಂ ಗೃಹಮೇಧಿ ಫಲಂ ಮಯಾ ॥
ಏತಾವದುಕ್ತ್ವಾ ತನಯಾ ಮೃಷೀನಾಹ ಮಹೀಧರಃ ।
ಇಯಂ ನಮತಿ ವಃ ಸರ್ವಾಂ- ಸ್ತ್ರೀಲೋಚನ ವಧೂರಿತಿ ॥
ಈಪ್ಸಿತಾರ್ಥ ಕ್ರಿಯೋದಾರಂ ತೇಽಭಿನಂದ್ಯ ಗಿರೇರ್ವಚಃ ॥
ಆಶೀಭಿರೇಧಯಾಮಾಸುಃ ಪುರಃ ಪಾಕಾಭಿರಂಬಿಕಾಂ ॥
ತಾಂ ಪ್ರಣಾಮಾದರ ಸ್ರಸ್ತ ಜಾಂಬೂನದವತಂಸಕಾಂ ॥
ಅಂಕಮಾರೋಪಯಮಾಸ ಲಜ್ಜಮಾನಾಮರುಂಧತೀ ॥
ತನ್ಮಾತರಂ ಚಾಶ್ರುಮುಖೀಂ ದುಹಿತೃ ಸ್ನೇಹವಿಕ್ಲವಾಂ ।
ವರಸ್ಯಾನನ್ಯ ಪೂರ್ವಸ್ಯ ವಿಶೋಕಮಕರೋದ್ಗುಣೈಃ ॥
ವೈವಾಹಿಕೀಂ ತಿಥಿಂ ಪೃಷ್ಟಾ- ಸ್ತತ್ಕ್ಷಣಂ ಹರಬಂಧುನಾ ।
ತೇ ತ್ರ್ಯಹಾದೂರ್ಧ್ವಮಾಖ್ಯಾಯ ಚೇರುಶ್ಚೀರ ಪರಿಗ್ರಹಾಃ ॥

ಪರ್ವತನು ಪೂರ್ಣ ಇಚ್ಛೆಯುಳ್ಳವನಾದರೂ ಮೇನೆಯ ಮೊಗವನ್ನು ನೋಡಿದನು. ಹೆಚ್ಚಾಗಿಯೂ ಗೃಹಸ್ಥರು ಕನ್ಯಾರ್ಥದಲ್ಲಿ ಕಳತ್ರ ಪ್ರಧಾನ ವ್ಯಕ್ತಿಗಳಾಗುತ್ತಾರೆ. (ಹೆಂಡತಿಯ ಇಚ್ಛೆಯನ್ನಪೇಕ್ಷಿಸುತ್ತಾರೆ.) ಮೇನೆ ಪತಿಯ ಇಷ್ಟವನ್ನು ಅನುಮೋದಿಸಿದಳು. ಪತಿವ್ರತೆಯರು ಪತಿಯ ಇಷ್ಟ ಕಾರ್ಯದಲ್ಲಿ ತಡೆಗೊಳ್ಳಲಾರರು. ಹಿಮವಂತನು ಆ ಬಳಿಕ ಇದು ನ್ಯಾಯ ಕೃತ್ಯವೆಂದು ಬುದ್ಧಿಯಿಂದ ವಿಮರ್ಶಿಗೊಂಡರಿತು ಮಂಗಲ ಸಾಧನಗಳಿಂದ ಅಲಂಕೃತೆಯಾದ ಪಾರ್ವತಿಯನ್ನು ಕೈಯಿಂದ ಹಿಡಕೊಂಡನು. ಎಲೆ ಮಗಳೆ ಬಾ! ನೀನು ವಿಶ್ವಾತ್ಮನಾದ ಶಿವನ ಭಿಕ್ಷಾವಸ್ತುವೆನಿಸಿರುವೆ. ಮುನಿಗಳೇ ಯಾಚಕರಾಗಿ ಬಂದಿರುವರು. ಗೃಹಸ್ಥ ಧರ್ಮಫಲವನ್ನು ನಾನು ಪಡೆದೆ. ಇಂತೆಂದು ಹೇಳಿ ಪರ್ವತರಾಜನು ಋಷಿಗಳಿಗೊರೆಯತೊಡಗಿದನು.

ಈಕೆ ಮುಕ್ಕಣ್ಣನ ವಧು. ಇದೋ ನಿಮಗೆ ನಮಿಸುವಳು." ಆಗ ಆ ಮುನಿಗಳು ತಮ್ಮ ಹಿತವನ್ನು ಸಾಧಿಸಿದ ಉದಾರನಾದ ಹಿಮವಂತನನ್ನು ಅಭಿನಂದಿಸಿ ಮುಂದೆ ಫಲಿಸುವ ಆಶೀರ್ವಚನಗಳಿಂದ ವೃದ್ಧಿಗೊಳಿಸಿದರು. ಹೊನ್ನ ಕರ್ಣಕುಂಡಲವನ್ನು ಧರಿಸಿ ಆದರದಿಂದ ನಮಸ್ಕರಿಸುತಿದ್ದ ನಾಚುತಿದ್ದ ಪಾರ್ವತಿಯನ್ನು ಸೆಳೆಗೊಂಡು ಅರುಂಧತಿ ತನ್ನ ಮಡಿಲಿಗೇರಿಸಿದಳು. ಮಗಳಲ್ಲಿರುವ ಸ್ನೇಹದಿಂದ ಕಣ್ಣೀರು ತುಂಬಿದ ಮೇನೆ ಶಿವನ ಹೆಣ್ಣಾಗುವಳೆಂದು ದುಃಖವನ್ನು ಒಂದೆಡೆ ಮರೆತಳು. ಸಪ್ತರ್ಷಿಗಳೊಡನೆ ಎಂದು ಮದುವೆಯ ದಿನ? ಅದಕ್ಕಾವ ಮುಹೂರ್ತವೆಂದು ಹಿಮವಂತನು ಕೇಳಲು ಮೂರು ದಿನದ ಬಳಿಕವೆಂದು ಹೇಳಿ ಪಯಣಿಸಿದರು.) ಕಾಳಿದಾಸನು ಇಲ್ಲಿ ಸಂಪೂರ್ಣ ಗೃಹಸ್ಥ ಧರ್ಮ ಚಿತ್ರವನ್ನು ತೋರಿದ್ದಾನೆ ವಿವಾಹ ಸಂಪರ್ಕ ವಿಚಾರದಲ್ಲಿ ಹಿರಿಯರ ಮಾತುಕತೆ, ತಾಯ್ತಂದೆಗಳ ಅಭಿಮತ, ಕನ್ನಿಕೆಯ ಹಿತಸಾಧನೆಗಾಗುತ್ತದೆ. ಪರ್ವತರಾಜನು ಮಗಳನ್ನು ಕೊಡುವ ವಿಚಾರದಲ್ಲಿ ಮೇನೆಯ ವಿಚಾರವನ್ನು ತೆಕ್ಕೊಂಡಿದ್ದಾನೆ. ಮಗಳನ್ನು ಕರೆದು ನೀನು ಭಿಕ್ಷಾವಸ್ತುವಾಗಿರುವೆಯೆಂದು ಕನ್ನಿಕೆಯ ಅಭಿಮತವನ್ನು ಕೇಳಿಕೊಂಡಿದ್ದಾನೆ. ಇಲ್ಲಿ ತೋರುತ್ತಿರುವ ದಾಂಪತ್ಯದ ಕಟ್ಟು ಪಾಡು ಶುಭಜನಕ. ಗೃಹಸ್ಥ ಧರ್ಮದವರು ಇಂತು ನಡೆದರೆ ಮುಂದೆ ಶ್ರೇಯಸ್ಸಿದೆ. ಕನ್ನಿಕೆಯರ ಜೀವನವು ಸುಖಮಯವಾಗುವುದು. ಮಹಿಳೆಯರ ಮಾಂಗಲ್ಯಮಯ ಜೀವನಕ್ಕೆ ಕಾಳಿದಾಸನು ಇಲ್ಲಿ ತೋರುತ್ತಿರುವ ಹಾದಿ ಹಿತ ಮತ್ತು ಮಂಗಲಕರ. ವೈವಾಹಿಕ ಜೀವನವನ್ನು ಸಾಧಿಸುವಲ್ಲಿ ಕಾಳಿದಾಸನು ತೋರಿದ ಈ ಮಾರ್ಗ ಸರ್ವಾನುಮತ ಮತ್ತು ಸರ್ವಾದರಣೀಯ. ಭಾರತ ಮಹಿಳೆಯರು ಮಾಂಗಲ್ಯಮಯ ಜೀವನವನ್ನು ನಿರ್ವಹಿಸುವುದಕ್ಕಾಗಿಯೇ ಈ ಚಿತ್ರವನ್ನು ಕಾಳಿದಾಸನು ಕುಮಾರಸಂಭವದಲ್ಲಿ ಕಲ್ಪಿಸಿಕೊಟ್ಟಿದ್ದಾನೆ. ಭಾವೀ ಜನಾಂಗದ ಶ್ರೇಯಸ್ಸಾಧನೆಯ ಹೊಸ್ತಿಲು ವಿವಾಹ ಸಂಬಂಧ. ಅದನ್ನು ಸರಿಯಾಗಿ ನೆರವೇರಿಸದಿದ್ದರೆ ಜೀವನದ ಪ್ರಥಮ ಪ್ರವೇಶ ಮಾರ್ಗದಲ್ಲೇ ಕಂಟಕವನ್ನೊಡ್ಡಿದಂತಾಗುವುದು. ಇದನ್ನರಿತು ನಮ್ಮ ಜನಾಂಗ ಜೀವನ ಕಲ್ಯಾಣವನ್ನು ಸಾಧಿಸಲಿ. ಭಾರತದ ಶ್ರೇಯಸ್ಸನ್ನು ಅಜರಾಮರವಾಗಿ ಬೆಳಗುವಂತೆ ಮಾಡಲಿ.



# ಕಾವ್ಯ ವಿಧಾತನೆನಿಗೊರೆವ ಕಾಳಿದಾಸ

ಕವಿ ಇನ್ನೊಬ್ಬ ಸೃಷ್ಟಿಕರ್ತ. ಈತನು ಸೃಷ್ಟಿಸುವ ಸೃಷ್ಟಿ ಜನತೆಯ ಕಲ್ಯಾಣಮಯ ಜೀವನಕ್ಕುಳ್ಳುದು. ರಾಷ್ಟ್ರದ ಅಳಿವು ಉಳಿವು ಇವೆರಡೂ ಇವನಿಂದ ಸಾಗುತ್ತಿದೆ. ಈತನು ಜನರ ಹೃದಯದ ಮೇಲೆ ತನ್ನ ಅಧಿಕಾರ ವನ್ನು ನಡೆಸುತ್ತಾನೆ. ತನ್ನ ಉದ್ದೇಶಭಾವನೆಯ ಪ್ರಚಾರಕಾರ್ಯವನ್ನು ನುಡಿಯಿಂದ ಸಾಗಿಸುತ್ತಿರುವನು. ಉದ್ದೇಶದ ಪ್ರಚಾರಕ್ಕಾಗಿಯೇ ವಾಙ್ಮ ಯದ ಸೃಷ್ಟಿ. ವಾಙ್ಮಯದಿಂದ ಸಿದ್ಧಿಸುವ ಆನಂದ ಲೌಕಿಕಾನಂದದಿಂದ ಭಿನ್ನವಾದುದು. ಕವಿವಿಶ್ವವನ್ನು ತನ್ನ ನುಡಿಯ ಮೂಲಕ ಚೇತನಗೊಳಿಸು ವನು. ಜನತೆ ಅದರಿಂದ ಜಾಗೃತಿಗೊಳ್ಳುತ್ತಿದೆ. ಜಾಗೃತಿಯಿಂದ ಉದ್ದಿಷ್ಟ ಕಾರ್ಯಸಿದ್ಧಿಗಾಗಿ ಯತ್ನಗೊಳ್ಳುವುದು. ಈ ಯತ್ನದ ಮೂಲಕ ಇಷ್ಟಸಿದ್ಧಿ, ಇಷ್ಟಸಿದ್ಧಿಯಿಂದ ಸುಖಪ್ರಾಪ್ತಿ, ಸುಖಪ್ರಾಪ್ತಿಯಿಂದ ಆಕಾಂಕ್ಷೆಯ ಮೋಕ್ಷ, ಜೀವನದ ಪುರುಷಾರ್ಥ ಸಾಧನೆಗಳುಂಟಾಗುವವು. ವಿಶ್ವದ ಪ್ರಗತಿಯ ಸಾಧ ನೆಗಿರುವ ಸಮಾಧಿ ಕವಿಯದು. ಜನತೆಯು ಈತನು ಉಪದೇಶಿಸಿದ ಭಾವ ಸಮಾಧಿಯಲ್ಲಿ ಮಗ್ನವಾಗುವುದು. ಆ ಬಳಿಕ ಈ ತಪಸ್ಸಿನ ಫಲವನ್ನು ಹೊಂದಲು ಶಕ್ತವಾಗುವುದು. ಈ ಶಕ್ತಿಯಿಂದ ಕವಿಯ ಕಾವ್ಯಾನಂದದಲ್ಲಿ ಮುಳುಗುವುದು. ಇದರಿಂದಲೇ ನಮ್ಮ ಪೂರ್ವಜರು ಕಾವ್ಯ ಬ್ರಹ್ಮನ ಕುರಿತು—

ಅಪಾರೇ ಕಾವ್ಯ ಸಂಸಾರೇ ಕವಿರೇವ ಪ್ರಜಾಪತಿಃ ।
ಯಥಾಸ್ಮೈ ರೋಚತೇ ವಿಶ್ವಂ ತಥೇದಂ ಪರಿವರ್ತತೇ ॥

ಎಂದು ಹಾಡಿದ್ದಾರೆ.

ಕಾವ್ಯಪ್ರಪಂಚ ಹಿರಿದು. ಅಸೀಮ. ಕವಿ ಅದರ ರಚಯಿತ. ಕವಿಯ ರುಚಿಯಂತೆ ವಿಶ್ವ. ವಿಶ್ವದ ಪರಿವರ್ತನೆ ಕವಿಯಿಂದಾಗುತ್ತಿದೆ ಯೆಂಬ ಈ ನುಡಿ ಯಥಾರ್ಥ.

ಮುಮ್ಮಟನು ಕವಿಯ ಕುರಿತು ಹೇಳಿದ ನುಡಿ ಇನ್ನೂ ವಿಶಾಲ ಮತ್ತು ಆಳವಾದುದು.

ನಿಯತಿ ಕೃತ ನಿಯಮ ರಹಿತಾಂ ಹ್ಲಾದೈಕಮಯೀ ಮನನ್ಯ ಪರತಂತ್ರಾಂ ।
ನವರಸರಸರುಚಿರಾಂ ನಿರ್ಮಿತಿ- ಮಾದಧತೀ ಭಾರತೀ ಕವೇರ್ಜಯತೀ ।

ಕವಿಯ ನುಡಿ ನಿಯತಿಯ (ಅದೃಷ್ಟ) ಮೇರೆಯನ್ನು ಮೀರಿದುದು. ಸ್ವಾತಂತ್ರ್ಯದ ಹುಟ್ಟನ್ನು ಕಲ್ಪಿಸಿ ಜೀವನಾನಂದಕ್ಕೆ ನಿಧಿ. ನವರಸ

ನಿರ್ಮಾತೃ. (ಆರು, ಒಂಭತ್ತು ರಸಗಳಲ್ಲ. ಇವನ್ನು ಮೀರಿದ ಹೊಸರಸದ ಸೃಷ್ಟಿ.) ಎಂಬೀ ಬಗೆ ಕವಿಗೊಪ್ಪತಕ್ಕದು. ಇಂತಹ ಕವಿಗಳು ಭಾರತೀಯರು. ಇದರಿಂದಲೇ ಈ ರೀತಿಯ ಮಾತುಗಳು ಬಂದಿವೆ. ಕವಿ ಸಾರ್ವಭೌಮನಾದ ಕಾಳಿದಾಸನು ಕವಿತೆಯೆಂದರೇನು? ಅದರ ಮಹತ್ವವೆಷ್ಟು? ಜನಸಮುದಾಯದಲ್ಲಿ ಇದರ ಸ್ಥಾನವೇನೆಂಬುದನ್ನು ಬಲ್ಲವನಿದ್ದಾನೆ. ಕುಮಾರ ಸಂಭವದಲ್ಲಿ ತನ್ನ ಬಗೆಯನ್ನು ಸೃಷ್ಟೀಕರಿಸಿದ್ದಾನೆ.

ವರ್ಣಪ್ರಕರ್ಷೇಸತಿ ಕರ್ಣಿಕಾರಂ ದುನೋತಿ ನಿರ್ಗಂಧತಯಾಸ್ಮ ಚೇತಃ।
ಪ್ರಾಯೇಣ ಸಾಮಗ್ರ್ಯವಿಧೌ ಗುಣಾನಾಂ ಪರಾಙ್ಮುಖೀ ವಿಶ್ವಸೃಜಃ ಪ್ರವೃತ್ತಿಃ॥

(ಕರ್ಣಿಕಾರದ ಹೂ [ಹೊಂಗಾರೆಯ ಹೂ] ಬಣ್ಣದಿಂದ ತುಂಬಿದ್ದರೂ ಪರಿಮಳವಿರದೆ ಇರುವುದರಿಂದ ಮನಸ್ಸನ್ನೇ ನೋಯಿಸುತ್ತದೆ. ಪ್ರಾಯೇಣ (ಹೆಚ್ಚಾಗಿ) ಬ್ರಹ್ಮನ ಪ್ರವೃತ್ತಿಯು ಗುಣಗಳ ಸಮುದಾಯದ ಸಂಪಾದನೆಯ ವಿಷಯದಲ್ಲಿ ಹಿಮ್ಮೊಗವಾಗಿದೆ. ಇಲ್ಲಿ ಕಾವ್ಯ ವಿಧಾತನೊಡನೆ ಓ ಕಾವ್ಯ ವಿದಾತ! ನೀನೇಕೆ ಚಿತ್ರಕಾವ್ಯವನ್ನು ಬರೆವೆ? ಶಬ್ದಾಡಂಬರದ ವರ್ಣರಚನೆಗೇಕೆ ಹೊರಡುವೆ? ಶಬ್ದಾಡಂಬರದ ಕಾವ್ಯದಿಂದೇನು ಫಲ? ಆವ ರಸವೂ ಇರದೆ ಕಾವ್ಯ ಕೆಡುವುದು. ಕವಿತೆಯೆಂಬುದು ಸುಂದರವಾದ ಹೂ. ಈ ಹೂವಿಗೆ ಸುವಾಸನೆ ಬೇಕು. ಸುವಾಸನೆಯಿರದ ಕುಸುಮ ನಿರರ್ಥಕ. ಮನಸ್ಸು ಕೊರಗುವುದು. ಮನಸ್ಸನ್ನು ಕೊರಗಿಸುವ ಶಬ್ದಚಿತ್ರದ ಕಾವ್ಯದ ಗೋಜು ನಿನಗೆ ಬೇಡ, ಜನತೆಯಲ್ಲಿ ಉತ್ತಮ ವಾಸನೆಯನ್ನು ಬೀರುವ ರಚನೆಯನ್ನು ರಚಿಸು. ನಿರರ್ಥಕವಾದ ಗ್ರಂಥಗಳನ್ನು ರಚಿಸಿ ಜನತೆಯನ್ನು ಕೊರಗಿಸಬೇಡ. ಉತ್ತಮ ವಿಚಾರವಿರದ ಹೊತ್ತಗೆಯಿಂದ ಜನಸಮುದಾಯ ಕೆಡುವುದು. ಕೆಟ್ಟ ವಿಚಾರಗಳನ್ನು ತುಂಬಿರುವ ಗ್ರಂಥರಾಶಿ ಜನಸಮುದಾಯಕ್ಕೆ ಹಿತವಲ್ಲ. ಜನತೆಯ ಮನಸ್ಸು ಹಾಳಾಗುವುದು. ಜನರ ಮನಸ್ಸನ್ನು ಕೆಡಿಸುವ ವಿಚಾರ ನಿನ್ನದಲ್ಲ. ಜನತೆಗೆ ಬೇಕಾದುದು ಉತ್ತಮ ಕುಸುಮ. ಜನಸಮುದಾಯದ ಮನಸ್ಸನ್ನು ಹಾಳುಗೊಳಿಸುವ ನಿನ್ನ ವರ್ತನೆ ಬೇಡವಾದುದು. ಎಲ್ಲಾ ತರಹದ ಕರ್ತವ್ಯ ಶಕ್ತಿ ನಿನ್ನಲ್ಲಿದೆ. ಅದನ್ನು ಹಾಳುಗೊಳಿಸಬೇಡ. ಅಧಿಕ ಕವಿಗಳ ವರ್ತನೆ ಇಂತಿದೆ. ಕಾವ್ಯ ವಿಧಾತನ ವೃತ್ತಿ ಗುಣವನ್ನು ತುಂಬುವುದಕ್ಕೆ. ಜನರನ್ನು ಉತ್ತಮ ಗುಣಪೂರ್ಣರನ್ನಾಗಿಸುವ ಭಾರ ನಿನ್ನದು. ಜನತೆಯಲ್ಲಿ ಗುಣ ತುಂಬಿ ವಿಶ್ವ ಬಂಧುತ್ವ ಭಾವನೆ ಮೊಳೆಯಲಿ. ಇದಕ್ಕಾಗಿಯೇ ಯತ್ನಿಸು. ಇದನ್ನೆಂದೂ

ಮರೆಯಬೇಡವೆಂದು ಎಚ್ಚರಿಸಿರುವನು. ವಿಶ್ವನಿರ್ಮಾತನು ಕವಿಯೆಂದೇ ಹೇಳಿರುವನು.

ಕವಿತೆ ಕವಿಹೃದಯವು ವೇದನಾ ಬಹುಲ ಭಾವಗಳ ಆಘಾತ ಪ್ರತ್ಯಾಘಾತಗಳ ಗಂಭೀರ ಗರ್ಜನೆಯಿಂದ ತಾನಾಗಿಯೇ ಮೊಳೆಯುವ ರತ್ನಶಲಾಕೆ. ಆದಿ ಕವಿಯೇ ಇದಕ್ಕೆ ಸಾಕ್ಷಿ. (ಆದಿ ಕವಿ ವಾಲ್ಮೀಕಿಗೆ ಕ್ರೌಂಚದ್ವಂದ್ವದಲ್ಲೊಂದರ ವಧೆಯುಂಟಾದ ಶೋಕ ಕಾವ್ಯಕ್ಕೆ ಉಗಮವೆನಿಸಿತು.)

ಕವಿತೆಯು ಕಲ್ಪನಾಕಲ್ಪಲತಿಕೆಯ ಅಪೂರ್ಣ ವಿಕಸಿತ ಕುಸುಮಸ್ತಬಕ. ಈ ಲತೆಯು ಹೃದಯದ ಆಲವಾಲ (ಕಟ್ಟೆ)ದಿಂದ ಕೂಡಿದೆ. ಭಾವನೆಯ ಭೂಮಿಯಲ್ಲಿ ಪ್ರತಿಭೆಯ ಸಹಜ ಸ್ನೇಹದ ಸೇಚನೆ ಮೂಲಕ ಕವಿತೆ ಮೊಳೆಯುವುದು. ಈ ಕವಿತೆಯ ಪರಿಮಲಸ್ವೀಕೃತಿ ಆನಂದಾನುಭವ ಮನಸ್ಸಿನ ತುಂಬಿಗುಳ್ಳದು. ತುಂಬಿ ರಸಜ್ಞನಾದಂತೆ ಈ ಕವಿತಾ ಕುಸುಮದ ಮೇಲೆ ಪ್ರಣಯವನ್ನು ಬೀರುವುದು. ಪ್ರೀತಿಸುವುದು. ಇರ್ವರೂ ಪ್ರಣಯ ಸೂತ್ರದಲ್ಲಿ ಬಿಗಿಗೊಂಡು ನಿಂದ ಬಳಿಕ ಆತ್ಮಸರ್ವಸ್ವ ತ್ಯಾಗಕ್ಕೆ ತಡೆಯೆಲ್ಲಿ?

ಕವಿತೆ ಅಪೂರ್ಣ ವಿಕಸಿತ ಕುಸುಮಸ್ತಬಕವೇ? ಪೂರ್ಣ ವಿಕಾಸ ಅದಕ್ಕಿಲ್ಲವೇ? ಎಂದು ಮನಸ್ಸಿನಲ್ಲಿ ಪ್ರಶ್ನೆ ಹುಟ್ಟಬಹುದು. ಪೂರ್ಣವಾದುದಕ್ಕೆ ಅಂತ್ಯವಿದೆ. ಆ ಲಾವಣ್ಯ ಅಚಿರ. ಈ ಲಾವಣ್ಯದ ಅವಗುಂಠನವನ್ನು ತೆಗೆದೊಡನೆ ಕವಿತೆಯ ರಹಸ್ಯ ಪ್ರಕಟವಾಗುವುದು. ಉತ್ಸುಕತೆ ಕೌತುಕಗಳು ರಹಸ್ಯದ ಅಸ್ತಿತ್ವದಿಂದಿದೆ. ಇಲ್ಲವಾದರೆ ರಸಾಸ್ವಾದನೆಯಲ್ಲೇನು ಜಾಣ್ಮನ. ಎಲೆಗಳೆಡೆಯಿಂದ ಹೊರಬೀಳುವ ತಿಂಗಳ ಬೆಳಕು ಮೋಡಗಳೆಡೆಯಿಂದ ಮಿಂಚುವ ಮಿಂಚು, ಇವುಗಳ ಮೌಲ್ಯವನ್ನು ಅಂಕಿಸಬರುವುದೇ? ಈ ರೀತಿಯಿಂದ ಮೋಹಕವಾದ ರಹಸ್ಯವನ್ನು ಅಡಗಿಸಿರಿಸುವುದೇ ಕವಿತಾ ರಹಸ್ಯ, ಇದೇ ಅದರ ಛಾಯೆ ಅಥವಾ ಮಾಟಗಾರಿಕೆ ಯಾ ಮಾಯೆ. ಕವಿತೆಯ ಆನಂದ ಸಾಕ್ಷಾತ್ಕಾರ ಸುಖ ಆತ್ಮವೇದ್ಯ. ವ್ಯಾಖ್ಯೇಯವಲ್ಲ. ಪರಮರಸಜ್ಞರಾದ ವಿದ್ವಾಂಸರು ಕಾವ್ಯಾನಂದವನ್ನು ಪುಲಕೋದ್ಗಮ ಮೌನಾವಲಂಬನೆಗಳಿಂದ ಪ್ರಕಟಗೊಳಿಸುವರು. ಇದರಿಂದಲೇ

ಕವೇರಭಿಪ್ರಾಯಮಶಬ್ದಗೋಚರಂ ಸ್ಫುರಂತಮಾರ್ದ್ರೇಷು ಪದೇಷು ಕೇವಲಂ।
ವದದ್ಭಿರಂಗೈಃ ಕೃತರೋಮವಿಕ್ರಿಯೈರ್ಜನಸ್ಯ ತೂಷ್ಣೀಂಭವತೋಽಯಮಂಜಲಿಃ

ಎಂದು ಕಾವ್ಯಾನಂದಕ್ಕೆ ಪ್ರಣಮಿಸಿರುವರು. ಸುಂದರವಾದ ಹೊಳೆ ಹೊಳೆವ ಈ ರತ್ನಶಲಾಕೆಯನ್ನು ಇಲ್ಲವೆ ರಸ ತುಂಬಿದ ಸ್ವಯಂಸುಂದರವಾದ ಕುಸುಮ ಕಲಿಕೆಯನ್ನು, ಬೇಡದ ಅಲಂಕಾರಗಳಿಂದ ತುಂಬುವುದು, ಹೊಳೆವ ಚಿನ್ನದಿಂದ ಬಂಧಿಸುವುದು, ಕಮಲದಲ್ಲಿ ಚಿತ್ರವನ್ನು ರಚಿಸುವುದು, ಜಾಜಿಯ ಹೂವಿಗೆ ಪರಿಮಳವನ್ನು ಚಿಮುಕಿಸುವುದು, ಹಿಮದ ಗಡ್ಡೆಯನ್ನು ನುಣುಪುಗೊಳಿಸುವುದು, ಕಾಮನ ಬಿಲ್ಲಿಗೆ ರಂಗನ್ನೆರಚುವುದು, ಮುತ್ತಿನಲ್ಲಿ ನೀರು ಕಾಂಬಂತೆ ಯತ್ನಗೊಳ್ಳುವುದು, ಇವು ಬಟ್ಟೆಯಲ್ಲಿ ಹೂ ಬಿಡಿಸಿ ತುಂಬಿಗಳನ್ನು ವಂಚಿಸುವ ಕಾರ್ಯ. ಕವಿತೆಯ ಲಾವಣ್ಯ ಎಂತಹುದೆಂದು ಆನಂದವರ್ಧನನು ಹೇಳಿರುವನು.

ಪ್ರತೀಯಮಾನಂ ಪುನರನ್ಯದೇವ ವಸ್ತ್ವಸ್ತಿ ವಾಣೀಷು ಮಹಾಕವೀನಾಂ ।
ಯತ್ತತ್ಪ್ರಸಿದ್ಧಾವಯವಾತಿರಿಕ್ತಂ ವಿಭಾತಿ ಲಾವಣ್ಯ ಮಿವಾಂಗನಾಸು ॥

[ಮಹಾಕವಿಗಳ ನುಡಿಯಲ್ಲಿ ತೋರುವ ವಸ್ತು ಇನ್ನೊಂದಿದೆ. ಅದು ನಾರಿಯರ ಎಲ್ಲಾ ಪ್ರಸಿದ್ಧಾವಯವಗಳನ್ನು ಬಿಟ್ಟು ನಿಂದ ಲಾವಣ್ಯ ರಾಶಿಯಂತಹುದು,] ಶಬ್ದಗಳ ಮೂಲಕ ಆ ಲಾವಣ್ಯವನ್ನು ಕೊಡುವುದೇ ಕವಿತೆಯ ಕೆಲಸ. ಇದಕ್ಕೆ ನಿರ್ದಿಷ್ಟ ಶೈಲಿಯನ್ನು ಕೊಡಲಾಗುವುದಿಲ್ಲ. ಹೃದಯದಲ್ಲಿ ವೇದನೆಯನ್ನು ತುಂಬಿರುವುದೇ ಮುಖ್ಯ. ಆ ವೇದನೆ ತನ್ನ ಪ್ರಕಟಣೆಗೆ ಮಾರ್ಗವನ್ನು ಹುಡುಕುವುದು. ಅಂಧಾನುಕರಣೆಯುಳ್ಳ ಹಳೆ ಸಾಂಪ್ರದಾಯವಾದಿಗಳನ್ನು ಕುರಿತು ಬಿಲ್ಹಣನು

ದ್ರಾಘೀಯಸೀ ದಾರ್ಷ್ಟ್ಯಗುಣೇನಯುಕ್ತಾ ಕೈಃ ಕೈರಪೂರ್ವೈ ಪರಕಾವ್ಯ ಖಂಡೈಃ
ಆಡಂಬರಂ ಯೇವಚಸಾಂ ವಹಂತಿ ತೇಕೇಪಿ ಕಂಥಾಕವಯೋಜಯಂತಿ

ಎಂದು ಹೇಳಿರುವನು. ಕವಿ ಸಾರ್ವಭೌಮನಾದ ಕಾಳಿದಾಸನು ತನ್ನ ಅಭಿಪ್ರಾಯವನ್ನು ಚುಟುಕಾಗಿ ಹೇಳಿದ್ದಾನೆ. ವಿಶ್ವದ ಹಿತ ಸಾಧನೆಯ ರಚನೆಗೊಳ್ಳುವಂತೆ ಬೋಧಿಸಿದ್ದಾನೆ. ಇದನ್ನು ಅನುಸರಿಸಿ ನಡೆವುದು ಕವಿಗಳ ಮತ್ತು ಲೇಖಕರ ಕರ್ತವ್ಯವಲ್ಲವೇ?



# ಒಪ್ಪೋಲೆ.

| ಪುಟ | ತಪ್ಪು. | ಒಪ್ಪು. |
|---|---|---|
| ೨ | ವೇಶ | ವೇಷ |
| ೩ | ಶಾಕುಂತಳಾ | ಶಾಕುಂತಲ |
| ,, | ಈಶದೀಶತ್ | ಈಷದೀಷತ್ |
| ,, | ಈಶಚುಂಬಿತ | ಈಷಚ್ಚುಂಬಿತ |
| ೫ | ಶಾಘ್ಯೇ | ಶ್ಲಾಘ್ಯೇ |
| ೭ | ವ-ವಿಿತಯುಂ | ವ-ವಿತ್ಯಯುಂ |
| ೧೦ | ಅವರ | ಅದರ |
| ,, | ಏಕರೇ | ಒಬ್ಬನೇ |
| ೧೩ | ದಾರಣ | ದಾರುಣ |
| ೧೪ | ವಾಗಾರ್ಥವಿವ | ವಾಗರ್ಥಾವಿವ |
| ೧೬ | ವಿಪ್ಲವಾಕ್ | ವಿಪ್ಲವಾತ್ |
| ೧೯ | ಶಾಕುಂತಳ | ಶಾಕುಂತಲ |
| ೨೨ | ದಾನಗೊಂಡರೆ | ದಾನವಾದರೆ |
| ,, | -ಗತಾಸ್ತ್ರಂ | -ರ್ಗತಾಸ್ತ್ರಂ |
| ,, | ತೆರೆದ | ತೆರದ |
| ೨೪ | ಶಾಂಙ್ಗ್ರರವ | ಶಾಙ್ಗ್ರರವ |
| ,, | ವರ್ಣನಾ | ವರ್ಣಾನಾಂ |
| ೨೫ | ಶಾಂಙ್ಗ್ರರವ | ಶಾಙ್ಗ್ರರವ |
| ,, | ಸ್ವೃರ | ಸ್ವೈರ |
| ೨೬ | ನಿಶೇಧಿಸು | ನಿಷೇಧಿಸು |
| ೨೮ | ಪ್ರಚಕ್ಷತೆ | ಪ್ರಚಕ್ಷ್ಮತೇ |
| ೩೧ | ಶಾಕುಂತಳೆ | ಶಕುಂತಳೆ |
| ,, | ಭೋಕ್ತಾರನನ್ನು | ಭೋಕ್ತಾರನಾಗಿ |
| ,, | ಮಾದುವನೋ | ಮಾಡುವನೋ? |
| ೩೨ | ಶಾಕುಂತಳೆ | ಶಕುಂತಳೆ |
| ,, | ಪ್ರತಿ | ಪ್ರತಿ |
| ೩೪ | ಶ್ಯಾಮಃ ತಪಾ | ಶ್ಯಾಮಸ್ತಪಾ |
| ,, | ಲೋಕಸ್ವ | ಲೋಕಸ್ಯ |

| ಪುಟ | ತಪ್ಪು. | ಒಪ್ಪು. |
|---|---|---|
| ೩೫ | ಗಾತ | ಗಾತ್ರ |
| ,, | ಬದಲಾವಣೆ | ಬದಲಾವಣೆಯು |
| ೪೦ | ತಾಪಸೆ | ತಾಪಸಿ |
| ೪೮ | ಜ್ಞಾನವನ್ನು | ಜ್ಞಾನದಿಂದ |
| ೪೯ | ಅಲೆಯಲ್ಪಡುತ್ತದೆ | ಅಲೆಯುತ್ತೇವೆ. |
| ೫೨ | ಒಲ್ವೈಯಿಸಿ | ಒಲಿಸಿ |
| ೫೩ | ಆಷರಿತೋಷ | ಆಪರಿತೋಷ |
| ೫೫ | ವಿಕ್ರಮೋರ್ವಶೀಯು | ಮಾಲವಿಕಾಗ್ನಿಮಿತ್ರ |
| ,, | ಬರೆದು | ಬರೆಯತೊಡಗುವಲ್ಲಿ |
| ೫೬ | ಧುಯೋರ್ಧನ | ದುಯೋರ್ಧನ |
| ೫೮ | ಸ್ತ್ರಯೂ | ಸ್ತ್ರಯಾ |
| ,, | ಸ್ವೆಚ್ಛಾ | ಸ್ವೇಚ್ಛಾ |
| ೬೧ | ಶಬ್ಧಾರ್ಥ | ಶಬ್ದಾರ್ಥ |
| ,, | ಅಭಿಲಾಶೆ | ಅಭಿಲಾಷೆ |
| ,, | ಲಕ್ಷಣಾ | ಲಕ್ಷಣ |
| ೬೨ | ಪೃಕೃತ್ಯಾ | ಪ್ರಕೃತ್ಯಾ |
| ,, | ಶಾಕುಂತಲಾ | ಶಾಕುಂತಲದ |
| ,, | ಉಧೃತ | ಉದ್ಧೃತ |
| ,, | ಸಂವಿಧಾನ | ಸಂವಿಧಾನದ |
| ೬೭ | ಶಾಕುಂತಳಾ | ಶಾಕುಂತಲ |
| ,, | ಕಿವಿ | ಕಿವಿಯು |
| ೬೯ | ತಾರುಣ್ಯ | ತಾರುಣ್ಯದ |
| ೭೦ | ಶಾಂರ್ಙ್ಗ | ಶಾರ್ಙ್ಗ |
| ೭೧ | ತಾಪಸೆ | ತಾಪಸಿ |
| ೭೨ | ತಾಪಿಸಿ | ತಾಪಸಿ |
| ೭೩ | ಬಾಲಕೆ | ಬಾಲಿಕೆ |
| ೭೪ | ಶಾಕುಂತಲಾ | ಶಾಕುಂತಲ |
| ೭೬ | ಶುಬಾ | ಶುಭಾ |
| ೭೭ | ಳಾಗಿದ್ದಿಲ್ಲ | ಳಾಗಿರಲಿಲ್ಲ. |
| ,, | ಅನುಜ್ಞೆಗೊಳ್ಳಿರಿ, | ಅನುಜ್ಞಾಪಿಸಿರಿ. |
| ೭೯ | ಂವರೆನಿಸುವರು | ಎನಿಸುವರು. |

| ಪುಟ | ತಪ್ಪು | ಒಪ್ಪು |
| --- | --- | --- |
| ೮೦ | ವಾಲ್ಮಿಕಿ | ವಾಲ್ಮೀಕಿ |
| ೮೧ | ಶಾಕುಂತಳದಲ್ಲಿ | ಶಾಕುಂತಲದಲ್ಲಿ |
| ೮೨ | ಶಾಂರ್ಗರವ | ಶಾರ್ಙ್ಗರವ |
| ೮೩ | ಆ ಹೊತ್ತಿನಲ್ಲಿ | ಈ ಹೊತ್ತಿನಲ್ಲಿ |
| ೮೮ | ಸಪರೋಕ್ಸ | ಕ್ವ ಪರೋಕ್ಷ. |
| ,, | ವರೇಗೆ | ವರೆಗೆ |
| ೮೯ | ಸ್ವಬಾಗ್ಯ | ಸ್ವಭಾಗ್ಯ. |
| ೯೦ | ಶಾಕುಂತಲಾ | ಶಾಕುಂತಲ |
| ,, | ಸತಿ | Q |
| ೯೧ | ಸ್ತ್ರಿಯರ | ಸ್ತ್ರೀಯರ |
| ೯೩ | ಕನಾರ್ಥ | ಕನ್ಯಾರ್ಥ |
| ,, | ವಿಧೇಕಾರ್ಯೆ | ವಿಧೇಕಾರ್ಯೇ |
| ,, | ಎಪ್ಪು | ಎಷ್ಟು |
| ೯೫ | ವಿಶದಗೊಳ್ಳು | ವಿಷದವಾಗು |
| ೯೮ | ವಿಧಾತನಗೊ | ವಿಧಾತನಿಗೊ |
| ೯೯ | ವಿದಾತ | ವಿಧಾತ |
| ೧೦೦ | ಸೇಚನೆ | ಸೇಚನೆಯು |
| ,, | ಅಸ್ತಿತ್ಸದಿಂದಿದೆ. | ಅಸ್ತಿತ್ವದಿಂದಿವೆ. |

